# ಹರಿದಾಸರು ಕಂಡ ಶ್ರೀನಿವಾಸ

*ಸಂಪಾದಕರು*

ಹೊ. ರಾ. ಸತ್ಯನಾರಾಯಣ ರಾವ್
ವೈ. ಎನ್. ಗುಂಡೂರಾವ್

ವಿಜಯ ಪ್ರಕಾಶನ
೧೨೩೧(೬೮೩), ೧೩ನೇ ಅಡ್ಡ ರಸ್ತೆ
ಗಿರಿನಗರ, ಬೆಂಗಳೂರು-೮೫.

---

**book is published with the Financial assista**
**nala Tirupathi Devasthanams under their sche**
**blish religious books"**

---

rst Edition : 1998

ages : 16 + 232

rice : Rs.75/-

ಕ್ಕುಗಳು : ಸಂಪಾದಕರು

ುಖಪುಟ : ಶ್ರೀ ವಾದಿರಾಜ್ ಒಡೆಯರ್

ಿ.ಟಿ.ಪಿ : ಶ್ರೀಮತಿ ಸವಿತಾ ಶರತ್

ಮುದ್ರಣ : ಸುಪ್ರೀಮ್ ಆಫ್‌ಸೆಟ್ ಪ್ರಿಂಟರ್ಸ್
ಜೆ.ಪಿ. ನಗರ, ಬೆಂಗಳೂರು-೭೮
ದೂರವಾಣಿ : ೬೬೩೯೧೧

# ಪ್ರ

ನ್ನಡ ಹರಿದಾಸ ಸಾಹಿತ್ಯ, ಇಡೀ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಅತ್ಯಂತ
ಪಡೆದಿದೆ. ಮಧ್ವಾಚಾರ್ಯರೇ ಹರಿದಾಸ ಸಾಹಿತ್ಯಕ್ಕೆ ಮೂಲ
ಚಂದನದಲ್ಲಿದ್ದ ಕೃಷ್ಣನನ್ನು ಮಧ್ವಾಚಾರ್ಯರು ಎತ್ತಿಕೊಂಡು ಭಕ್ತಿಪ
ನ್ಮಯರಾಗಿ ಹಾಡುತ್ತಾ, ಕುಣಿಯುತ್ತಾ ಸ್ತುತಿಸಿದ ಭಾವಗೀತಾಂ
ಸ್ತೋತ್ರವಾಗಿ, ಅದೇ ಮುಂದೆ, ಗೀತ ನರ್ತನದಿಂದ ಕೃಷ್ಣನನ್ನು ಪೂಜಿಸುವ
ರದಾಸರಂತಹವರಿಗೆ ರಾಜಮಾರ್ಗವಾಯಿತು.

ಾಸಸಾಹಿತ್ಯ ಇಂದು ನಿನ್ನೆಯ ಕಥೆಯಲ್ಲ. ರಾವಣನ ಆಸ್ಥಾನದಲ್ಲಿ ಹನುಮ
ಯಾರೆಂದು ಕೇಳಿದೊಡನೆಯೇ 'ದಾಸೋಹಂ ಕೋಸಲೇಂದ್ರಸ್ಯ
ದಾಗಲೇ ದಾಸಭಾವ ಪ್ರಕಟವಾಯಿತು. ದಾಸಸಾಹಿತ್ಯ ಗುರುಮಧ್ವರಿಂದ
ತು. ನರಹರಿತೀರ್ಥರಿಂದ ನಾದಸುಧೆಯಾಯಿತು. ಶ್ರೀಪಾದರ
ಪಡೆದು ವ್ಯಾಸರಾಜ, ವಾದಿರಾಜರಿಂದ ವ್ಯಾಪಕ ದಾಸಕೂಟವಾಗಿ ಭಕ್ತಿ
ಲ್ಲಿ ಉತ್ತಮ ಜ್ಞಾನವನ್ನು ಕನ್ನಡ ಜನಮನಕ್ಕೆ ಮುಟ್ಟಿಸಿತು. ಪುರಂದರದ
ುಷರಿಂದ ಈ ಸಾಹಿತ್ಯಗಂಗೆ ಪ್ರಬುದ್ಧ ಪಾತ್ರ ಪಡೆಯಿತು. ಕನಕದಾಸರಿಂದ ಕ
ದ ಸೊಗಡನ್ನು ಮೈಗೂಡಿಸಿಕೊಂಡು ಜ್ಞಾನ–ಭಕ್ತಿ–ವೈರಾಗ್ಯಗಳ ತ್ರಿವೇಣಿ ಸಂ
ಕೊಡಗಿತು. ಮಹೀಪತಿದಾಸರಿಂದ ಮಹಾ ಅಪರೋಕ್ಷ ಜ್ಞಾನದ ನೂರಾರು ಕಿ
ಬಂದು ಯೋಗ ಶಕ್ತಿಯ ಮಹತ್ವವೂ ಪ್ರಕಟವಾಯಿತು. ಬೆಳದಿಂಗಳ
ಂಕಟದಾಸರು ಪ್ರಶಾಂತತೆ, ಪ್ರಸನ್ನತೆಗಳ ಸುಂದರ ಬಂಧುರ ಸಾಹಿತ್ಯವನ್ನು ನಿ
ದಾಸರಿಂದ ದಾಸಸಾಹಿತ್ಯ ವ್ಯಾಪಕವಾದ ತಾತ್ವಿಕ–ಸಾತ್ವಿಕ ಯಶಸ್ಸು
ಲದಾಸರಿಂದ ಗಾಂಭಿರ್ಯ ಮಾಧುರ್ಯಗಳ ಭಕ್ತಿ ಪುಳಕವಾಗಿ ತ
ಥದಾಸರಿಂದ ಜಯಪ್ರದ ಸಾಹಿತ್ಯದ ಉತ್ತುಂಗ ಶೃಂಗವೆನಿಸಿ ಹರಿಕಥಾಮೃ

ಪುರಂದರದಾಸರಿಂದ ಗುಪ್ತವಾಗಿದ್ದ ದಾಸಸಾಹಿತ್ಯ ಸಂಘಟನ
ಶೀಲನದ ಸ್ವರೂಪವನ್ನೇ ಪಡೆದುಕೊಂಡಿತು. ರಾಮದಾಸರಂತಹ ರಾಮ
ದ ರಾಮನಾಮ ರಸವಾಗಿ ಹರಿಯಿತು.

ಹರಿದಾಸರ ಪದ–ಪದ್ಯಗಳು ಸಾಧಕನ ಮಾರ್ಗದ ದೀವಟಿಗೆಗಳಿದ್ದಂತೆ. ಅವು ಸಾ
ಗಿ ಜೀವಂತ ಶಕ್ತಿಯಾಗಿ ಭಕ್ತಿಪಂಥದ ಸಂಘಟನೆಗೆ ಬಹುದೊಡ್ಡ ಸಾಧನವಾಯಿ
ರ್ತನೆಗಳ ಮೂಲಕ ಹರಿದಾಸರು ಸುಜ್ಞಾನವೆಂಬ ಅಮೃತದ ಗುಟುಕುಗಳನ
ಕೊಂಡು ಸಜ್ಜನ ಸಮಾಜದ ನಿರ್ಮಾಣಕ್ಕೆ ಕಾರಣರಾದರು. 'ಈಸಬೇಕು ಇದ್ದು ಜ
ಧೈರ್ಯಸ್ಥೈರ್ಯಗಳ ಉತ್ಸಾಹೀ ಬದುಕಿನತ್ತ ಜನರನ್ನು ತಿರುಗಿಸಿದರು. 'ಮ
ದು ಇದ ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ' ಎಂದು ಮಾನವ ಜೀವನದ
ಕತೆಯನ್ನು ಮನನ ಮಾಡಿಕೊಟ್ಟರು.

ದಾಸರು ನುಡಿದದ್ದೆಲ್ಲಾ ನರಹರಿಯ ಹಾಡು. ಅವರು ನಡೆದದ್ದೆಲ್ಲಾ ತೀರ್ಥ
ಸೃಷ್ಟಿಯಲ್ಲಿ ಮದಮತ್ಸರಗಳ ಬಾಳು ನಿರರ್ಥಕ. ಹರಿಸ್ಮರಣೆಯ ಬದುಕೊಂದೇ
ಮತ ಭಕ್ತಿಯ ಪಥ. ಅರ್ಥವರಿತ ಕರ್ಮ ಅವರ ಸಾಧನೆಯ ಮರ್ಮ. ಜೀ
ಗಿ ಅರಿತುಕೊಂಡಿದ್ದ ಅನುಭವಿಗಳು, ಅನುಭಾವಿಗಳು ಹರಿದಾಸರು. ಅವರ ದ
ದೇಶವು ಪುಣ್ಯದೇಶವು; ಸರ್ವಕಾಲವು ಪರ್ವಕಾಲವು; ಸರ್ವಜೀವರು ದಾನ
ಮಾತುಗಳೆಲ್ಲಾ ಮಂತ್ರವು; ಸರ್ವಕೆಲಸಗಳೆಲ್ಲ ಪೂಜೆಯು, ಸದಾ ಪರಮಾತ್ಮ
ವವರಿಗೆ.

ಹರಿದಾಸರ ಪ್ರತಿಹಾಡಿಗೂ ಅಂಕಿತವೊಂದಿರುತ್ತದೆ. ಇದು ಮಧ್ವಾಚಾ
ಸಸ್ತೋತ್ರದ ಪ್ರತಿ ಅಧ್ಯಾಯದ ಕಡೆಯಲ್ಲೂ 'ಆನಂದತೀರ್ಥ' ಎಂಬ
ಂದಿನಿಂದಲೂ ಪರಿಪಾಠವಾಗಿದೆ. 'ಅಂಕಿತವಿಲ್ಲದ ದೇಹನಿಷಿದ್ಧ, ಅಂಕಿ
ಲಭಿಸದು'. ಅಂಕಿತವನ್ನು ಮುದ್ರಿಕೆಯೆಂದೂ ಕರೆಯುತ್ತಾರೆ. ಅಂಕಿತವನ್ನು
ಳು ನೀಡುವಾಗ, ಗುರುಗಳು ಶಿಷ್ಯನಿಗೆ ನೀಡಲಾಗುವ ಅಂಕಿತದಿಂದ ಹಾಡು ಪ್ರಾ
ಳ ಅಂಕಿತ ಕಡೆಯಾಗುವಂತೆ ಅಂಕಿತಪದ ರಚಿಸುವುದು ರೂಢಿ. ಹರಿದಾಸರು
ಸದೀಕ್ಷೆ, ತಪ್ತಮುದ್ರಾಂಕನ ಸ್ವೀಕರಿಸಬೇಕು. ಶ್ರುತಿ–ಸ್ಮೃತಿ ಇತಿಹಾ
ಯಿಡಬೇಕು. ಏಕಾದಶಿ ಮುಂತಾದ ವ್ರತಗಳನ್ನು ಆಚರಿಸಬೇಕು. ಹರಿಭಜನೆ

ಂಡಿತು. ಸ್ವರೂಪೋದ್ಧಾರ ಹಾಗೂ ಲೋಕೋಪಕಾರ ಹರಿದಾಸ ವ್ಯಕ್ತಿತ್ವ
ತು.

ರಿದಾಸಸಾಹಿತ್ಯ ಕರ್ನಾಟಕಸಂಗೀತದ ವ್ಯಾಪಕತೆಗೆ, ಜನಪ್ರಿಯತೆಗೆ
ಯಿತು. ಕೇವಲ ರಾಜಸ್ಥಾನಗಳ, ವಿದ್ವಾಂಸರ, ಶ್ರೀಮಂತರ ಸೊತ್ತಾಗಿದ್ದ ಸ
ಮಾನ್ಯನ ಮನೆಬಾಗಿಲು ತಲುಪಿದ್ದೇ ಹರಿದಾಸರಿಂದ. ರಾಗಲಯಬದ್ಧ ರ
ವಾದ ಉತ್ತಮ ಬೋಧೆ ನೀಡಿದ್ದಾರೆ. ಅವು ಜನಮನದಲ್ಲಿ ನಿಲ್ಲಬಲ್ಲವು ಎಂ
ಮಾತಾಡುವ ಬದಲು ಹಾಡತೊಡಗಿದರು.

ರಿದಾಸರು ಓಡಾಡಿದ್ದೇ ಜನಸಾಮಾನ್ಯರ ನಡುವೆ . ಅದಕ್ಕೇ ಜನ
ವಾದ ಸಾಹಿತ್ಯ ಅವರಿಂದ ತುಂಬಿ ತುಳುಕಿತು. ಅವರ ಹೃದಯ ಬಡ
ತ್ತಿತ್ತು. ಹಾಗಾಗಿಯೇ 'ಬಲ್ಲಿದನು ನೀನೆಂದು ಬಡವರ ಬಾಯಿ ಬಡಿಯ
ಧೈರ್ಯ ಅವರಿಗಿತ್ತು. 'ರಾಗಿಯ ತಂದೀರಾ ಭಿಕ್ಷಕೆ ರಾಗಿಯ ತಂದೀರಾ
ರ ಧ್ವನಿಯಾಗಿ ದಾಸರು ಸಮಾಜದಲ್ಲಿ ಓಡಾಡಿದರು.

ರಿಕಥಾಮೃತಸಾರ, ಹರಿಭಕ್ತಿಸಾರ, ಮುಂತಾದ ಕಾವ್ಯಗಳಿಂದ, ಕೀರ್ತನೆ, ದೇ
ಉಗಾಭೋಗ, ವೃತ್ತನಾಮ, ದಂಡಕ ಮುಂತಾದ ವಿಶಿಷ್ಟ ಪ್ರಕಾರಗಳ ದ
ಕೋಲುಹಾಡು, ಜೋಗುಳ, ಲಾಲಿ, ಶೋಭಾನೆ ಮುಂತಾದ ಜಾನಪದ ಹಿ
ಾಗಿದೆ. ದಾಸಸಾಹಿತ್ಯದಲ್ಲಿ ಹರಿಸ್ತುತಿ, ಗುರುಸ್ತುತಿ, ತತ್ವಪದಗಳು, ಉಪದೇಶ
, ಅನುಭಾವನಿರೂಪಣೆ, ತೀರ್ಥಕ್ಷೇತ್ರಮಹಿಮಾ, ಪುರಾಣಪ್ರ
ತವಾಗಿವೆ. ದಾಸಸಾಹಿತ್ಯದ ಭಾಷೆ ಕನ್ನಡವಿದ್ದರೂ ಸಂಸ್ಕೃತ, ತೆಲುಗು, ತಮಿಳು
ಭಾಷೆಗಳಿಗೂ ಕನ್ನಡದೊಡನೆ ಹಾಸುಹೊಕ್ಕಾಗಿದ್ದು ಭಾವೈಕ್ಯತೆಗೆ ಇದು ನಿದರ್ಶ

ಾಸಸಾಹಿತ್ಯ ಆಚಾರ್ಯ ಮಧ್ವರಿಂದ ಪ್ರೇರಣೆ ಪಡೆದರೂ, ಪ್ರಾರಂಭ ಪಡೆ
ಶಿಷ್ಯರಾದ ನರಹರಿತೀರ್ಥರಿಂದ ಎಂದೇ ಸಂಪ್ರದಾಯ. ಶ್ರೀಪಾದರಾ
ಷೆಯಾದ ಕನ್ನಡದಲ್ಲೇ ಕಾವ್ಯ ರಚಿಸಿ, ಯುಗಯುಗಳಿಂದ ಗಾಢ–ಗೂ
ರ ಮಹಾಮಂತ್ರಗಳನ್ನು, ಕಾವ್ಯಗಳನ್ನು, ವೇದೋಪನಿಷತ್ತುಗಳನ್ನು ಸಾಮಾ
ಗುವ ತಿಳಿಗನ್ನಡದಲ್ಲಿ ತಿಳಿಸಿಕೊಟ್ಟರು. ಸೂಕ್ಷ್ಮಭಾವನೆಗಳನ್ನು ಸಂವೇ
ಸಲು ಸಂಗೀತವೇ ಸಮರ್ಥ ಮಾಧ್ಯಮ ಎಂಬ ಸಂಗತಿಯನ್ನು

ಗಿ ಪ್ರಕಟಿಸುವ ಶ್ರೀಪಾದರಾಜರು ಸತಿ ಅನುಕೂಲವಾಗಿರಬೇಕು, ಸುತನಲ್ಲಿ ಗುಣ
ತನಾಗಿರಬೇಕು, ಮತ ಒಂದಾಗಿರಬೇಕು, ಜಪದ ಜಾಣುವೆ ಬೇಕು, ತಪನೇಮ
ಸವ್ರತಬೇಕು, ಉಪಶಾಂತವಿರಬೇಕು, ಸತ್ಸಂಗಬೇಕು, ದುಸ್ಸಂಗ ಬಿಡಬೇಕು, ರಂಗ
ರೆಸಂಬಿರಬೇಕು ಎಂದು ಸಾತ್ವಿಕ ಬದುಕಿನ ರೀತಿನೀತಿಗಳನ್ನು ನಿರೂಪಿಸಿದರು.

ಶ್ರೀಪಾದರಾಜರ ಶಿಷ್ಯರಾದ ವ್ಯಾಸರಾಜರು ವ್ಯಾಸಕೂಟ, ದಾಸ ಕೂಟಗಳ ಪ್ರವ
ಮೃತ, ತರ್ಕತಾಂಡವ, ಚಂದ್ರಿಕಾದಂತಹ ಉದ್ಗ್ರಂಥಗಳನ್ನು ರಚಿ
ನ್ನಡದಲ್ಲಿ ಹಾಡುಗಳನ್ನು ರಚಿಸಿ ದಾಸಸಾಹಿತ್ಯ ಪ್ರಸರಣ ಮಾಡಿದರು. ೧೭೨೮ರ ಸ
ವೂರಿನ ದೊರೆ ತುಳಜಾಜಿ 'ಸಂಗೀತಸಾರಾಮೃತ' ರಚಿಸಿದ್ದು, ಅದರಲ್ಲಿ
ಜರನ್ನು 'ಪ್ರಸಿದ್ಧಸಂಗೀತ ವಿದ್ಯಾ ಸಂಪ್ರದಾಯ ಪ್ರವರ್ತಕ' ಎಂದೇ ಕೊಂಡಾ

ರ್ಮಸ್ಥಳದಲ್ಲಿ ಮಂಜುನಾಥನ ಪ್ರತಿಷ್ಠೆಮಾಡಿ, ಉಡುಪಿಯಲ್ಲಿ ಕೃಷ್ಣನ
ಯ ವ್ಯವಸ್ಥೆ ಮಾಡಿದ ವಾದಿರಾಜರು ದಕ್ಷಿಣಕನ್ನಡದಿಂದ ಹರಿದಾಸ ಸಾಹಿತ್ಯದ
ಗೆಯಾಗಿ ಮೂಡಿಬಂದವರು. ವೈಕುಂಠವರ್ಣನೆ, ಲಕ್ಷ್ಮೀಶೋಭಾನೆ, ಗುಂ
, ಭ್ರಮರಗೀತೆ, ನಾರದಕೊರವಂಜಿ, ಕೀಚಕವಧೆ, ಸುಳಾದಿ, ಉಗಾಭೋಗ, ಕೀ
ಯಾಪಕವಾಗಿ ಅವರು ದಾಸಸಾಹಿತ್ಯ ರಚನೆ ಮಾಡಿದರು.

ಪುರಂದರದಾಸರಂತೂ ಕರ್ನಾಟಕ ಸಂಗೀತ ಪಿತಾಮಹರು. ಲೋಕ
ದರ್ಶಿಗಳಾಗಿ, ತತ್ವಶೋಧನೆ ಆತ್ಮನಿರೀಕ್ಷಣೆಯ ಮೂಲಕ ಹರಿನಾಮ ಸ್ಮ
ವನಿಯನ್ನು ಸಜ್ಜನ ಸಮುದಾಯಕ್ಕೆ ಹಂಚುತ್ತಾ ಹೊರಟು 'ದಾಸ
ರದಾಸರಯ್ಯಾ'ಯನ್ನುವುದಕ್ಕೆ ಅನ್ವರ್ಥವಾಗಿ ನಾಲ್ಕು ಲಕ್ಷದ ಎಪ್ಪತ್ತೈದು ಸಹಸ್ರ
ರಚಿಸಿದರು.

ಜೀವನಾನುಭವಕ್ಕೆ, ವಿವೇಕ ಶೀಲತೆಗೆ ಜಾನಪದ ಮೊರೆತಕ್ಕೆ ಅಪೂರ್ವ ನಿದರ್ಶನ
ಹಿತ್ಯ ಕನಕದಾಸರಿಂದ ಮೂಡಿಬಂದಿದ್ದು ಕೀರ್ತನೆ, ಷಟ್ಪದಿ, ಸಾಂಗತ್ಯ
ಗಗಳು ಅವರಿಂದ ಓತಪ್ರೋತ ಹೊಮ್ಮಿವೆ. ಗ್ರಾಮ್ಯದ ಗಮ್ಮತ್ತಿಗೆ, ವಿ
ತ್ಯಕ್ಕೆ, ರಸಿಕರ ನವರಸಗಳಿಗೆ, ಭಗವದ್ಭಕ್ತಿಗೆ ಮತ್ತು ಅಪರೋಕ್ಷಜ್ಞಾನಕ್ಕೆ ಅಮೋ
ಶವೆಂದರೆ ಕನಕದಾಸರ ಸಾಹಿತ್ಯ.

ವಿಯ ಪ್ರಸಿದ್ಧರಾಗಿದ್ದಾರೆ. ಸಾಹಿತ್ಯಕ್ಷೇತ್ರಕ್ಕಾಗಿ ಹರಿಕಥಾಮೃತಸಾರ, ಕನ್ನಡ ಸಾ
ರು ದಾರಿಯಲ್ಲಿ ಒಂದು ಪ್ರಮುಖ ಮೈಲಿಗಲ್ಲಾಗಿದ್ದು, ಅದು ಜಗನ್ನಾಥದ
ರತ್ನವನ್ನು ಆನಂದತೀರ್ಥಸಾಗರದಿಂದ ಮೇಲೆತ್ತಿ ತಂದು ಸುಜೀವಿಗಳಿಗೆ ನೀ

ಖಂಡಕಿಯ ಮಹಿಪತಿದಾಸರು ಬಿಜಾಪುರ ಸುಲ್ತಾನನಲ್ಲಿ ಅಧಿಕಾರಿಗಳಾಗಿದ್ದು
, ಹರಿದಾಸರಾಗಿ ಯೋಗಮಾರ್ಗದಿಂದ ಅಪರೋಕ್ಷ ಜ್ಞಾನಿಗಳಾಗಿ ನ
ಗಳನ್ನು ರಚಿಸಿದರು. ಜಗನ್ನಾಥದಾಸರಿಂದ ಅನುಗ್ರಹೀತರಾಗಿ ಅ
ಕಾರದಾಸರಿಂದ ದೀಕ್ಷೆಪಡೆದು ಗುರುಶ್ರೀಶವಿಠಲರೆಂದೇ ಖ್ಯಾತರಾದ ದಾಸರ
ು ರಚಿಸಿದರು.

ೋಸಗಿ ಸ್ವಾಮಿರಾಯಾಚಾರ್ಯರೆಂದೇ ಖ್ಯಾತರಾದ ಗುರು ಜಗನ್ನಾಥವಿಠ
ನ್ನಡ ಎರಡು ಭಾಷೆಗಳಲ್ಲೂ ಅಪ್ರತಿಮ ಪಾಂಡಿತ್ಯ ಹೊಂದಿದ್ದು, 'ರಾಘವೇಂದ್ರ
ಶಿಷ್ಟ ಕನ್ನಡ ಕಾವ್ಯ ಒಂದನ್ನು ಇವರು ರಚಿಸಿದ್ದಾರೆ. ಗಾಂಭೀರ್ಯ, ಪ್ರಾ
ಇವರ ಕೃತಿಗಳು ಹೆಸರಾಗಿವೆ. ಹೆಳವನಕಟ್ಟೆ ಗಿರಿಯಮ್ಮನ ಮುಗ್ಧಭಕ್ತಿ ಪ್ರಾಸಾ
ಹಳ್ಳಿ ಭೀಮವ್ವನವರ ತತ್ವಭರಿತ, ಪ್ರಮೇಯಭರಿತ ಕೃತಿಗಳು ದಾಸ
ಯವಾಗಿವೆ.

ುಸಲ್ಮಾನ ಪಂಥದಿಂದ ದಾಸಪಂಥಕ್ಕೆ ಪರಿವರ್ತನ ಶೀಲರಾಗಿ ಬಂದ ರಾ
ಚಿತ್ತದಿಂದ ರಾಮಧ್ಯಾನಪರರಾಗಿ ರಚಿಸಿರುವ ರಾಘವಗೀತ ಹಾಡುಗಳ
ಷ್ಟಿದ್ದು, ಕನ್ನಡ ದಾಸ ಸಾಹಿತ್ಯಕ್ಕೆ ಇವು ವಿಶಿಷ್ಟ ಕೊಡುಗೆಯಾಗಿವೆ.

ಃ'' **ಹರಿದಾಸರು ಕಂಡ ಶ್ರೀನಿವಾಸ**'' ಕೃತಿಯಲ್ಲಿ ಅಪರೋಕ್ಷ ಜ್ಞಾನಿಗಳಾದ
ರೆಯ ಅನೇಕ ಹಾಡುಗಳಿದ್ದು, ಅವರ ಬಗ್ಗೆ ಸಂಕ್ಷಿಪ್ತ ಪರಿಚಯವನ್ನು
ಹಿತ್ಯಾಸಕ್ತರಿಗೆ ಹಾಗು ಶ್ರೀನಿವಾಸನ ಭಕ್ತರಿಗೆ ಇದು ಅತ್ಯಂತ ಉಪಯುಕ್ತ ಕೃತಿ
ರೆಲ್ಲಾ ಅನೇಕ ಕೃತಿಗಳನ್ನು ರಚಿಸಿದ್ದರೂ ಶ್ರೀನಿವಾಸನನ್ನು ಕುರಿತು ಹಾಡು
ಂಡು, ರೋಮಾಂಚಿತ ಹರ್ಷರಾಗಿ ಭಕ್ತಿಯುದ್ರೇಕದಿಂದ ಹಾಡಿ ಕುಣಿದಿ
ಪಲ್ಲಿ ಕಾಣಬಹುದು.

ಂಥದೊಂದು ಅಪೂರ್ವ ಕೃತಿಯನ್ನು ಹೊರತರುತ್ತಿರುವ ಸಂಪಾ

ವಲ್ಲಿ ಚಿರಪರಿಚಿತರು. ಇವರು ದಾಸಸಾಹಿತ್ಯದಲ್ಲಿ ವಿಶೇಷ ಆಸ್ಥೆ ವಹಿಸಿ, ಈ
ಗೆ ಶ್ರಮಿಸಿದ್ದಾರೆ.

ರುಪತಿ ದೇವಸ್ಥಾನದ ದಾಸ ಸಾಹಿತ್ಯ ಪ್ರಾಜೆಕ್ಟ್ ಹಾಗೂ ಬೆಂಗಳೂರಿನ ಹ
ುಯು ದಾಸಸಾಹಿತ್ಯದ ಕಾರ್ಯಕ್ರಮಗಳನ್ನು ವ್ಯಾಪಕವಾಗಿ ವಿಸ್ತರಿ
ಂತ್ಯವನ್ನು ಜನಪರ ಹಾಗೂ ಜನಪ್ರಿಯವನ್ನಾಗಿ ಮಾಡುತ್ತಿರುವ ಸಂದರ್ಭದಲ್ಲಿ
ಾಗುತ್ತಿರುವುದು ತುಂಬಾ ಔಚಿತ್ಯಪೂರ್ಣ ಹಾಗೂ ಶುಭ ಸಂಕೇತವಾಗಿದೆ.

ೀ ಹೊ. ರಾ. ಸತ್ಯನಾರಾಯಣರಾವ್ ಹಾಗೂ ಶ್ರೀ ವೈ. ಎನ್. ಗುಂಡೂರಾವ್
ತುಂಬಿದ ಅಭಿನಂದನೆಗಳೊಡನೆ, ಇಂತಹ ಅನೇಕ ಕೃತಿಗಳು ಇವರಿಂದ ಹೊ
ಾರ್ಥಿಸುತ್ತೇನೆ.

*– ವಿದ್ಯಾವಾಚಸ್ಪತಿ ಡಾ।। ಅರಳುಮಲ್ಲಿಗೆ ಪಾರ್ಥ*

ನ್ನಡ ಸಾಹಿತ್ಯಕ್ಕೆ ಹರಿದಾಸರ ಕೀರ್ತನೆಗಳ ಕೊಡುಗೆ ಅನನ್ಯ. ಸಂಸ್ಕೃತ ಕಾವ್ಯಗ
ಾಡಿಕೊಳ್ಳಲಾರದಂತಹ ಸಾಮಾನ್ಯ ಜನರನ್ನು ದೃಷ್ಟಿಯಲ್ಲಿಟ್ಟುಕೊಂಡು
ರೆನಿಸಿದ್ದ ವ್ಯಾಸರಾಯರು, ವಾದಿರಾಜರಾದಿಯಾಗಿ ದಾಸಪಂಥವನ್ನು
ರು ಹರಿದಾಸರು ಕನ್ನಡದಲ್ಲಿ ಭಕ್ತಿಪ್ರಧಾನವಾದ, ನೀತಿಬೋಧಕವಾ
ದ್ಧವಾದ ಕೀರ್ತನೆಗಳನ್ನು ರಚಿಸಿ ಜನಾದರಣೀಯವಾಗಿಸಿದ್ದಾರೆ.

ೀ ಹರಿದಾಸರ ಕೀರ್ತನೆಗಳಲ್ಲಿ ಭಾಷೆಯ ಸತ್ವವನ್ನು ಹೀರಿಕೊಂಡು, ಜಾನಪದ ಸ
ೂಂಡು, ಆಡುಮಾತಿನ ಅಂತಃಸತ್ವವನ್ನು ಮೈಗೂಡಿಸಿಕೊಂಡು, ಭಕ್ತಿ
ಗಳನ್ನು ಆಡು ಭಾಷೆಯ ಮೂಲಕ ಜನ ಸಾಮಾನ್ಯರಿಗೆ ತಲುಪಿಸಿದ್ದು ಸಾ
ನಲ್ಲ. ಹೀಗೆ ಹರಿದ ಭಕ್ತಿಸಾಹಿತ್ಯವು ಹದಿನೈದನೆಯ ಶತಮಾನದಲ್ಲಿ ದಾ
ಗಿ ಭಕ್ತಿ, ವೇದಾಂತ, ತತ್ತ್ವ ಮತ್ತು ಸಮಾಜದ ಅಂಕುಡೊಂಕುಗಳನ್ನು ತಿದ್ದುವ
ಸನಸಾಮಾನ್ಯರಿಗೂ ಆಧ್ಯಾತ್ಮಿಕ ತೃಷೆಯನ್ನು ಹಿಂಗಿಸಿ ಮುಕ್ತಿ ಮಾರ್ಗವನ್ನು ತ
ು ಐದು ಶತಕಗಳನ್ನು ದಾಟುವಷ್ಟು ಮಂದಿ ಹರಿದಾಸರು ಕನ್ನಡ ಸಾಹಿ
ಯನ್ನು ನೀಡಿದ್ದಾರೆ; ಇವರು ರಚಿಸಿರುವ ಕೀರ್ತನೆಗಳ ಸಂಖ್ಯೆಯೇ ಲಕ್ಷಲಕ್ಷ

ಚಾರ್ಯ ಮಧ್ವರಿಂದ ಪ್ರೇರಣೆ ಪಡೆದು, ನರಹರಿತೀರ್ಥರಿಂದ ಪ್ರಾರಂಭವ
ಸಮಯದಲ್ಲಿ ಸಣ್ಣಸಣ್ಣ ಕೀರ್ತನೆಗಳನ್ನು ರಚಿಸಿ ಹಾಡಿದ ಶ್ರೀಪಾದರ
ಸಸಾಹಿತ್ಯಕ್ಕೆ ನಾಂದಿಯಾಯಿತು. ಹೀಗೆ ಆರಂಭವಾದ ಹರಿದಾಸಸಾಹಿತ್ಯವು
ಲ್ಲಿ ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಪುರಂದರ–ಕನಕ
ಸವಾಗಿ ಉಚ್ಛ್ರಾಯ ಸ್ಥಿತಿಗೇರಿತು. ವಿಜಯನಗರದ ಪತನದ ನಂತರ ಸುಮಾ
ಲ ಮರೆಯಾಗಿದ್ದು ನಂತರ ವಿಜಯದಾಸರ ನೇತೃತ್ವದಲ್ಲಿ, ಶ್ರೀ ಗೋಪಾ
ೀಹನದಾಸರು, ಶ್ರೀ ಜಗನ್ನಾಥದಾಸರು ಮುಂತಾದವರಿಂದ ಮುಂದುವರ

ಪ್ಪತ್ತನೆಯ ಶತಮಾನದಲ್ಲಿಯೂ ಹರಿದಾಸಸಾಹಿತ್ಯವು ವೈವಿಧ್ಯಮಯವಾಗಿ,
ತ್ತಾ ಬಂದಿದೆ. ದಾಸ ಪೀಳಿಗೆಯ ಪರಂಪರೆಯನ್ನನುಸರಿಸಿ, ಸಂಗೀತ ಶಾಸ್ತ್ರವ
ೀಬದ್ಧವಾಗಿ, ರಾಗ–ತಾಳ–ಲಯಗಳನ್ನೊಳಗೊಂಡು ಹಾಡಲು ಅನುಕ
ಗಳು ಒಂದೆಡೆ ರಚಿತವಾಗುತ್ತಿದ್ದರೆ ಮತ್ತೊಂದೆಡೆ ಹರಿದಾಸಸಾಹಿತ್ಯದ

ಹರಿದಾಸರ ಪಾತ್ರ ಹಾಡಾಯಿತು. ಇಷ್ಟು ಪಜ್ಜಯು
ಹಾದಿಯಾಯಿತು. ಸಂದರ್ಶಿಸಿದ ಪುಣ್ಯ ಕ್ಷೇತ್ರಗಳ ಮಹಿಮೆಯನ್ನು
ಭೂವೈಕುಂಠವೆಂದೇ ಪ್ರಸಿದ್ಧವಾದ ತಿರುಪತಿಯನ್ನು ಸಂದರ್ಶಿಸದ
ಹೇಳಬಹುದು. ಶ್ರೀನಿವಾಸನನ್ನು ಕುರಿತು ರಚಿಸಿರುವ ಕೀರ್ತನೆ, ಸ
ಸಂಗ್ರಹಿಸಿ ಪುಸ್ತಕರೂಪದಲ್ಲಿ ಪ್ರಕಟಿಸಿದರೆ ಹಾಡುವವರಿಗೆ ಮತ್ತು
ಅನೂಕೂಲವಾದೀತೆಂಬ ದೃಷ್ಟಿಯಿಂದ ಈ ಕೆಲಸಕ್ಕೆ ಕೈ ಹಾಕಿ
ಸಮಗ್ರವಲ್ಲವೆಂಬ ಅರಿವು ನಮಗಿದೆ. ಆರ್ಥಿಕ ಮಿತಿ, ಪುಸ್ತಕ ಪುಟ
ಚೌಕಟ್ಟಿಗೊಳಪಟ್ಟಿದ್ದರಿಂದ ಸಂಗ್ರಹಿಸಿರುವ ಮಾಹಿತಿ ಮತ್ತೊಂದು
ಮುಂದೆ ಪ್ರಕಟಿಸುವ ಆಶಯವೂ ಇದೆ.

ಈ ಕೃತಿ ಪ್ರಕಟವಾಗಲು ಕಾರಣರಾಗಿ ಆರ್ಥಿಕ ನೆರವನ್ನು ನೀ
ದೇವಸ್ಥಾನದ ಆಡಳಿತ ಮಂಡಳಿಯವರಿಗೆ ವಿಶೇಷವಾಗಿ ನಮ್ಮ ಕೃತಜ್ಞತೆ

ತಮ್ಮ ಕಾರ್ಯ ಬಾಹುಳ್ಯದ ನಡುವೆಯೂ ಕೇಳಿದೊಡನೆಯೇ
ಪ್ರಸ್ತಾವನೆಯನ್ನು ಬರೆದುಕೊಟ್ಟ ಡಾ|| ಅರಳುಮಲ್ಲಿಗೆ ಪಾರ್ಥ
ಸ್ನೇಹಪೂರ್ವಕ ನಮಸ್ಕಾರಗಳು.

ಪುಸ್ತಕ ಪ್ರಕಟಣೆಗೆ ಆರ್ಥಿಕವಾಗಿ ಬೆನ್ನೆಲುಬಾಗಿನಿಂತ ಶ್ರೀ
ಮತ್ತು ಶ್ರೀಮತಿ ಸುಧಾ. ಆರ್. ರಾವ್, ಶ್ರೀ ಕೆ. ಟಿ. ಚಂದ್ರಶೇಖ
ಶ್ರೀ ಸ. ಜಗನ್ನಾಥ್ ಮತ್ತು ಎಚ್. ಜಿ. ಪುಟ್ಟಣ್ಣ ಇವರುಗಳಿಗೆ ಋಣಿ

ಈ ಕೃತಿ ಪ್ರಕಟಣೆಗೆ ಹಲವು ವಿಧದಲ್ಲಿ ನೆರವು ನೀಡಿದ ಶ್ರೀ
ಶ್ರೀ ಪ್ರಹ್ಲಾದರಾವ್, ಶ್ರೀ ಎಂ. ಆರ್. ಗೋಪಾಲಕೃಷ್ಣ, ಶ್ರೀ ಎ
ಶ್ರೀ. ಬಿ. ಎನ್. ಸತ್ಯನಾರಾಯಣ ರಾವ್ ಮತ್ತು ಶ್ರೀ ವೆಂಕಟೇಶ ಪ್ರ

ಈ ಪುಸ್ತಕಕ್ಕೊಂದು ಅಂದವಾದ ಮುಖಚಿತ್ರ ಬಿಡಿಸಿದ , ಶ್ರೀ
ರವರಿಗೆ–

ಕೀರ್ತನೆಗಳನ್ನು ಕಂಪ್ಯೂಟರಿಗೆ ತುಂಬಿಸಿದ ಶ್ರೀಮತಿ ಸವಿತಾ ಶ

ಮುದ್ರಣದ ಹೊರೆಹೊತ್ತು ಅತ್ಯಲ್ಪ ಕಾಲದಲ್ಲಿ ಅಚ್ಚುಕಟ್ಟಾಗಿ ಮ
ಆಫ್‌ಸೆಟ್ ಪ್ರಿಂಟರ್ಸ್‌ನ ಶ್ರೀ ಅರುಣ್ ಕುಮಾರ್ ಮತ್ತು ಸಿಬ್ಬಂದಿಯ

ಮತ್ತು 'ಕೊಂಡು ಓದುವ, ಹಾಡುವ' ನಿಮಗೆಲ್ಲರಿಗೂ ನಮ್ಮ

# ಪ ರಿ ವಿ ಡಿ

| | |
|---|---|
| ನಾನೇನು ಮಾಡಿದೆನೋ ವೆಂಕಟರಾಯ | ಪುರಂದರದಾಸರು |
| ನಮಿಸುವೆ ನಾ ನಿನ್ನ ಚರಣ ಕಮಲಕ್ಕೆ | ಶ್ರೀಪತಿವಿಠಲದಾಸರು |
| ನಾರಾಯಣಾದ್ರಿಕೃತವಾಸ ಶರಣು | ಜಗನ್ನಾಥದಾಸರು |
| ನಿನಗ್ಯಾಕೆ ದಯ ಬಾರದೊ ಶ್ರೀ | ರಘುನಾಥವಿಠಲರು |
| ನಿನ್ನ ಅರಸುತನಕ್ಕೇನೆಂಬೆನೊ ವೆಂಕಟೇಶಾ | ವಿಜಯದಾಸರು |
| ನಿನ್ನ ದಿವ್ಯ ಮೂರುತಿಯ | ಪುರಂದರದಾಸರು |
| ನಿನ್ನ ನಾನೇನೆಂದೆನೋ ವೆಂಕಟರಾಯ | ಕನಕದಾಸರು |
| ನಿನ್ನ ನೋಡಿ ಧನ್ಯನಾದೆನೊ | ಪುರಂದರದಾಸರು |
| ನಿನ್ನ ಮಹಿಮೆಯನಾರು ಬಲ್ಲರು | ಪ್ರಸನ್ನವೆಂಕಟದಾಸರು |
| ನೋಡಿದೆ ವೇಂಕಟ ನಿನ್ನ ನೋಡಿದೆ | ಗುರುಜಗನ್ನಾಥದಾಸರು |
| ನೋಡಿರಮ್ಮ ವೆಂಕಟೇಶ ಹೂಡಿದಾಟವ | ತಂದೆ ವೆಂಕಟೇಶವಿಠಲರು |
| ನೋಡು ನೋಡು ವೆಂಕಟೇಶ | ಪುರಂದರದಾಸರು |
| ಪನ್ನಗಾದ್ರಿನಿವಾಸ ಸುದರ್ಶನ | ಜಗನ್ನಾಥದಾಸರು |
| ಪನ್ನಗಾದ್ರಿಪತಿ ನಮಗೆ ನೀಗತಿ | ಪುರಂದರದಾಸರು |
| ಪಾದಕಂಡು ಪಾವನಾದೆನೊ | ಶ್ರೀ ರಾಮದಾಸರು |
| ಪಾದವ ತೊಳೆದ ಗಗನ ರಾಜನು | ವೆಂಕಟವಿಠಲರು |
| ಪಾಪೋಸು ಪೋದವಲ್ಲ ಸ್ವಾಮಿ | ಪುರಂದರದಾಸರು |
| ಪಾಲಿಸಯ್ಯ ಪವನಸಯ್ಯ | ಗೋಪಾಲದಾಸರು |
| ಪೊರೆ ಸುರೇಶ ಶ್ರೀಶ ಶ್ರೀನಿವಾಸ | ಶ್ರೀ ರಾಮದಾಸರು |
| ಪೋಷಿಸೆನ್ನ ವೆಂಕಟೇಶ | ಶ್ರೀ ರಾಮದಾಸರು |
| ಪ್ರಾತಃಸ್ಮರಾಮಿ ರಮಯಾ ಸಹ | ವ್ಯಾಸರಾಯರು |
| ಬಂದು ನಿಂದಿಹ ನೋಡಿ | ಪುರಂದರದಾಸರು |
| ಬಂದೆವಯ್ಯ ಗೋವಿಂದ ಶೆಟ್ಟಿ | ಕನಕದಾಸರು |
| ಬಂದೇ ಬಂದೆ ಬಂದೆ ಸ್ವಾಮಿ | ಗೋಪಾಲದಾಸರು |
| ಬಣ್ಣಿಸಲಳವೆ ನಿನ್ನ ವೆಂಕಟರನ್ನ | ಪುರಂದರದಾಸರು |
| ಬಣ್ಣಿಸಾಲೆಮ್ಮಾ ನಾನು | ಪ್ರಸನ್ನವೆಂಕಟದಾಸರು |

| ಹಾಡುಗಳು | ದಾಸರು |
|---|---|
| ವೆಂಕಟಾಚಲ ನಿವಾಸ ಜಗದೀಶ | |
| ವೆಂಕಟಾಚಲವಾಸ ವೇದಾಂತ ವೇದ್ಯಾ | ವ್ಯಾಸವಿಠಲರು |
| ವೆಂಕಟಾದ್ರಿ ವರದಾ | ಪ್ರಸನ್ನವೆಂಕಟದಾಸರು |
| ವೆಂಕಟೇಶ ಕಾಯೋ | ಜಗನ್ನಾಥದಾಸರು |
| ವೆಂಕಟೇಶ ದಯಮಾಡೋ | ಪುರಂದರದಾಸರು |
| ವೆಂಕಟೇಶ ನಮೋ ವೆಂಕಟೇಶ | ಮಹಿಪತಿದಾಸರು |
| ವೆಂಕಟೇಶ ನಿನ್ನ ನಾಮಕ್ಕೆ | ಪುರಂದರದಾಸರು |
| ವೆಂಕಟೇಶ ಬೇಡಿಕೊಂಬೆ | ಪುರಂದರದಾಸರು |
| ವೆಂಕಟೇಶ ಭವ ಸಂಕಟ ಕಳೆ ವೆಂಕಟೇಶ | ಗುರುಗೋವಿಂದವಿಠಲರು |
| ವೆಂಕಟೇಶ ಭವ ಸಂಕಟ ಪರಿಹರಿಸೋ | ಶ್ರೀಪತಿವಿಠಲರು |
| ವೆಂಕಟೇಶ ಮಂತ್ರ ಒಂದೇ | ವಿಜಯದಾಸರು |
| ವೆಂಕಟೇಶ ವೆಂಕಟನಾಯಕ | |
| ವೆಂಕಟೇಶನ ಮಹಿಮೆಯ ಹೊಗಳುವಾ | ಪ್ರಸನ್ನವೆಂಕಟದಾಸರು |
| ವೆಂಕಟೇಶ ಶ್ರೀ ವೆಂಕಟೇಶ ಪಾಲಿಸು | ಪ್ರಸನ್ನವೆಂಕಟದಾಸರು |
| ವೇಣುನಾದ ಬಾರೋ ಶ್ರೀ | ಪುರಂದರದಾಸರು |
| ಶರಣ ಜನರ ಪಾಲ ಹರಿ ದಯಾಸಿಂಧುವೆ | ಶ್ರೀ ರಾಮದಾಸರು |
| ಶರಣು ವೆಂಕಟರಮಣ ನಿನ್ನ ಚರಣವ | ಪುರಂದರದಾಸರು |
| ಶರಣು ವೆಂಕಟರಮಣ ಭಕ್ತ | ಕೃಷ್ಣರಾಯರು |
| ಶರಣು ಶರಣು ನಿನಗೆಂಬೆನೊ ವಿಠಲ | ಪುರಂದರದಾಸರು |
| ಶ್ರೀನಿವಾಸನಂಘ್ರಿಯ ಸೇವೆಯ | ಪುರಂದರದಾಸರು |
| ಶ್ರೀನಿವಾಸ ನೀನೇ ಪಾಲಿಸೊ ಶ್ರಿತಜನ | ಪುರಂದರದಾಸರು |
| ಶ್ರೀನಿವಾಸ ನಿಮಿಷಮುನಿ | ಪ್ರಸನ್ನವೆಂಕಟದಾಸರು |
| ಶ್ರೀನಿವಾಸ ಬಾರೋ ಮನಕೆ ನೀ ಬೇಗನೆ | ವರದಗೋಪಾಲವಿಠಲರು |
| ಶ್ರೀನಿವಾಸ ಶ್ರೀನಿವಾಸ ದೀನರಕ್ಷಕ | ಉರಗಾದ್ರಿವಾಸವಿಠಲರು |
| ಶ್ರೀನಿವಾಸಾ ನಿನ್ನಾಟ ಏನು ಹೇಳಲಿ | ಗುರುಜಗನ್ನಾಥದಾಸರು |

| | |
|---|---|
| ಶ್ರೀನಿವಾಸನೆ ನಿನ್ನ ಧ್ಯಾನವ | ಶ್ರೀನಿವಾಸಮೂರ್ತಿ |
| ಶ್ರೀನಿವಾಸನು ಒಲಿಯನು ಕೇಳೊ | ಪುರಂದರದಾಸರು |
| ಶ್ರೀನಿವಾಸನು ಬಂದ ಕೋನೇರಿ ತಿಮ್ಮಪ್ಪ | ಪುರಂದರದಾಸರು |
| ಶ್ರೀರಮಣ ಸರ್ವೇಶ ಸರ್ವಗ | ಗುರುಜಗನ್ನಾಥದಾಸರು |
| ಶ್ರೀವೆಂಕಟೇಶ ಎನ್ನ ಸಲಹಲ್ಯಾಕೆ | ಹೆಳವನಕಟ್ಟೆ ಗಿರಿಯಮ್ಮ |
| ಶ್ರೀವೆಂಕಟೇಶನ ಬಿಡಬ್ಯಾಡಿ | ಪ್ರಸನ್ನವೆಂಕಟದಾಸರು |
| ಶ್ರೀ ವೆಂಕಟೇಶಾ ಸಲಹು ವೆಂಕಟೇಶ | ಪ್ರಸನ್ನವೆಂಕಟದಾಸರು |
| ಶ್ರೀಶ ನೀನಹುದೋ ಶೇಷಾಚಲ | ವಾದಿರಾಜರು |
| ಶ್ರೀಶ ಶ್ರೀನಿವಾಸ ಎನ್ನ ದ್ಯಾಸದೀ | ಶ್ರೀ ರಾಮದಾಸರು |
| ಶ್ರೀಶೈಲದೊಳಗಿಪ್ಪ ಸ್ವಾಮಿಪುಷ್ಕರಣಿ | ಜಗನ್ನಾಥದಾಸರು |
| ಸಕಲ ದುರಿತಗಳ ಪರಿಹಾರ | ವರದಪುರಂದರವಿಠಲರು |
| ಸಪ್ತಗಿರಿಯವಾಸ ಶ್ರೀ ವೆಂಕಟೇಶ | ಗುರುಗೋವಿಂದವಿಠಲರು |
| ಸಲಹು ವೆಂಕಟರಮಣ | ಪ್ರಸನ್ನವೆಂಕಟದಾಸರು |
| ಸಾಗಿ ಬಾರಯ್ಯಾ ಭವರೋಗದ ವೈದ್ಯನೆ | ವಿಜಯದಾಸರು |
| ಸಾರಿದೆನೊ ನಿನ್ನ ವೆಂಕಟರನ್ನ | ವಾದಿರಾಜರು |
| ಸಿಂಗನ ಯೇರಿದ ನರಸಿಂಗ | ವಿಜಯದಾಸರು |
| ಸ್ತ್ರೀಯರೆಲ್ಲರು ಬನ್ನಿರೆ | ವಾದಿರಾಜರು |
| ಸ್ಮರಿಸಿದವರನು ಕಾಯ್ವ | ಶ್ರೀಪಾದರಾಜರು |
| ಸ್ವಾಮಿ ಪುಷ್ಕರ ತೀರ ನಿಲಯ ನಮೋ | ಪ್ರಸನ್ನವೆಂಕಟದಾಸರು |
| ಹರೇ ವೆಂಕಟಶೈಲ ವಲ್ಲಭ | ಶ್ರೀಪಾದರಾಜರು |
| ಜಯ ಮಂಗಳಂ ನಿತ್ಯ ಶುಭ ಮಂಗಳಂ | ವಾದಿರಾಜರು |
| ಜಯ ಮಂಗಳಂ ನಿತ್ಯ ಶುಭ ಮಂಗಳಂ | ವಿಜಯದಾಸರು |

ಪೂರ್ವಿ

ಅಂಜಿಕ್ಯಾಕೆನಗಂಜಿಕೆ
ಕಂಜನಾಭ ಶ್ರೀನಿವಾಸನ ದಯವಿರಲು

ಅಶನವಸನವನ್ನು ಕುಳತಲ್ಲೆ ನಡೆಸುವ
ನಿಶಿದಿನ ನೀಚರಾಧೀನ ಮಾಡದೆ
ಹಸನಾಗಿ ತನ್ನಂಘ್ರಿ ನೆಳಲೊಳು ಬಚ್ಚಿಟ್ಟು
ಕುಶಲದಿ ಸಾಕುವ ಧೊರೆಯ ನಂಬಿದ ಬಳಿಕ

ಹುಲ್ಲುಕಚ್ಚಿ ಕಲ್ಲುಹೊತ್ತು ಧನವನುಳ್ಳ
ಕ್ಷುಲ್ಲಕ ಚಿತ್ತವ ಕಾಯುವಾಸಕ್ತಿ
ಎಲ್ಲ ವ್ಯವಹಾರವ ಮಾಡುವ ಬಲ ನನ -
ಗಿಲ್ಲೆಂದು ಆಯಾಸಬಡಲೀಸದವನಿರೆ

ಆವ ದೇಶದಲಿರೆ ಆವ ಕಾಲದಲಿರೆ
ಸೇವೆಗೆ ನಾ ತಪ್ಪೆ ಕೃಪೆ ತಪ್ಪಿಸಾ
ಭಾವಿಕರೊಡೆಯಾ ಶ್ರೀಪ್ರಸನ್ವೆಂಕಟಾದ್ರೀಶಾ
ಸಾವು ಕಳೆದು ಜೀವಕಾಶ್ರಯನಾಗಿರೆ

೨

ಭೈರವಿ

ಅಂತರಂಗದೊಳು ಪೊಳೆವವನು ಶ್ರೀ
ಕಾಂತನೊ ಬೊಮ್ಮನ ಪಡದ ದೇವಾನೊ
ಕಂತುಜನಕಾನೊ ಅನಂತನದಿಯಪಿತನೊ
ಅಂತಕಾಂತಕನ ಪೆತ್ತಯ್ಯನೊ ಅಯ್ಯನೊ
ಸಂತತಚಿಂತಿಪ ಭಕ್ತರ ಮನೋಹರನೊ

ಹೊಂತುಕಾರನೊ ಜಗದಂತರಿಯಾಮನೊ
ತಂತುಗಾರನೊ ಶೃಂಗಾರವರನೊ
ಪಂಥದ ದೈವಾವ ವಿಜಯವಿಠಲರೇಯಾ
ಎಂಥಾವರನ ಭ್ರಾಂತಿಗೊಳಿಸುವ ಧಿಟ್ಟನೊ

ಮಟ್ಟ

ಶ್ರೀಶ ಈಶ ಶೇಷ ಭೂಷಾಧೀಶ ದಾಸ
ರಾಶ ಪಾಶ ಕ್ಲೇಶನಾಶ ದಾಶವೇಷ ದಾಶಧೀಶಾ
ಕಾಶವಾಸ ಹೃಷಿಕೇಶ ವಿಜಯವಿಠಲ
ಶೇಷಪೋಷ ಲೇಶವೆನಿಸ

ತ್ರಿವಿಡಿ

ಅಲೌಕೀಕ ವಸ್ತುವೊ ಅಮಂದನಂದಾನೊ
ಮೂಲಾಧಾರನೊ ಸಕಲಗುಣಪರಿಪೂರ್ಣನೊ
ಕಾಲಾದಿಗಳಧಿಷ್ಠಾನವಾದ ಮಹಿಮನೊ
ಮೂಲೋಕದಲಿ ಮೆರೆವ ಮುದ್ದುಲಾವಣ್ಯನೊ
ಬಾಲಕ್ರೀಡೆಯತೆರದಿ ಆಡುವ ಅಗಣಿತನೊ
ಏಳು ಕಮಲದಲ್ಲಿ ವಾಸವಾಗಿದ್ದವನೊ
ಏಳು ಗೊಳಿಯನು ವಂದೇಬಾರಿ ಬಿಗಿದವನೊ
ಲಾಲಿಪಾಡಿಸಿಕೊಂಡ ನಾಗಾರಿಗಮನನೊ
ಮೇಲುಗಿರಿಯವಾಸ ವಿಜಯವಿಠಲ ವೆಂಕಟ
ಶೈಲದಲ್ಲಿ ಇಪ್ಪ ಸರ್ವರಾಭೀಷ್ಟನೊ

ಅಟ್ಟ

ವೀರಮುದ್ರಿಕೆ ಬೆರಳರವಿಂದ ಪಾದನೊ
ಘೋರಗರುವಗೆಜ್ಜೆ ಚಾರುಹೇಮಪೆಂಡೆ

ಹಾರಕೌಸ್ತುಭ ಹೀರತಾರಾದಿಸರನೊ
ಶ್ರೀರಮಣಿವಕ್ಷ ಸಿರಿಗಂಧಲೇಪ ಶೃಂ
ಗಾರದ ದರಹಸ್ತ ಸಾರಿಕಂಬುಧರನೊ
ಚಾರುಮೊಗದಂತ ನಾಸನಯನ ಕರ್ನಾ
ಪಾರಭೂಷಣವಾದ ಕಿರೀಟಾಂಗದ ನೂ
ಪೂರ ತಿರುಗಿ ತಿರುಗಿ ತೋರುವ ಜಾಣನೋ
ಸಾರ ಹೃದಯವಾಸ ವಿಜಯವಿಠಲ ಕಂ
ಸಾರಿ ಸಾರಿ ಸಾರಿಗೆ ಪೊರೆವವನೊ

ಆದಿ

ಮಸ್ತಕದಲ್ಲಿ ಅಭಯಹಸ್ತವನು ಇಟ್ಟಬಲು
ಅಸ್ತಮಾನ ಉದಯದಾವಸ್ಥಿಯನು ಹರಿಸುತ್ತಾ
ಸ್ವಸ್ಥಾನದಲ್ಲಿ ಯೆನ್ನ ಪ್ರಸ್ತುತವನ್ನು ನಡಿಸಿ
ಹಸ್ತಕನ್ನ ಮಾಡು ಪರವಸ್ತುವೆ ವಿಜಯವಿಠಲ
ವಿಸ್ತಾರಮಹಿಮನೊ ಕಸ್ತೂರಿಮೃಗದಂತಂ
ತಸ್ತವಾಗಿ ಪೊಳವಾನೊ

ಜತೆ

ಇಂದು ಸುಳಿದಂತೆ ಅನುಗಾಲ ಎನ್ನೊಳಗೆ
ಬಂದು ಉದ್ಧರಿಸೋದು ವಿಜಯವಿಠಲರೇಯಾ

೨

ಅಪ್ಪವೆಂಕೋಬನ ನೇತ್ರದಲಿ ನೋಡಿ ಪವಿತ್ರಳಾದೆನೋ
ತಪ್ಪುಗಳೆಲ್ಲ ನಿನಗರ್ಪಿಸುವೆ ನಾನೀಗ
ಒಪ್ಪಿಕೋಬೇಕೊ ತಿಮ್ಮಪ್ಪ ಕರುಣಾನಿಧಿಯೆ

ಇದು ನಿನಗೆ ಸದನಾಯಿತೊ ದೇವ

ಹುತ್ತಿನೊಳಗಡಗಿ ನೀ ಗುಪ್ತದಿಂದಿರುತಿರಲು
ಉತ್ತಮ ಗೋವು ಬಂದು
ನಿತ್ಯದಲಿ ಕ್ಷೀರವನು ಕರೆಯೆ ಗೋವಳನಿಂದೆ
ನೆತ್ತಿಯನೊಡೆದುಕೊಂಡು
ಸಿಟ್ಟಿನಿಂದಲಿ ಚೋಳರಾಯಗೆ ಶಾಪವನು
ಕೊಟ್ಟು ಕಿರೀಟವನು ಇಟ್ಟು ಮೆರೆಯುವ ದೇವ

ಮಾಯಾರಮಣನೆ ನಿನ್ನ ಗಾಯದೌಷಧಕ್ಹೋಗಿ
ಭೂರಮಣನ್ವರಾಹನಿಂದ
ನೂರುಪಾದ ಭೂಮಿಕೊಟ್ಟರೆ ಸಾಕೆಂದು-
ಪಾಯದಿಂದದನ್ವ್ಯಾಪಿಸಿ
ತಾಯಿ ಬಕುಳಾದೇವಿಯಿಂದ ಪೂ-
ಜೆಯಗೊಂಬೊ ಶ್ರೀಯರಸು ನಿನಗೆ ಸರಿಯೆ ದೇವ

ನಾಟಕಧಾರಿ ಕಿರಾತರೂಪವ ಧರಿಸಿ
ಬೇಟೆಗೆನುತಲಿ ಪೋಗಲು
ತೋಟದಲಿ ಚೆಲ್ವೆ ಪದ್ಮಾವತಿಯ ಕಡೆಗಣ್ಣ
ನೋಟದಿ ಮನಸೋಲಿಸಿ
ಬೂಟಕತನದಿ ಜಗಳಾಟವನ್ನೆ ಮಾಡಿ
ಪಾಟುಬಟ್ಟು ಕಲ್ಲಲೇಟುತಿಂದೆಯೋ ದೇವ

ಗದಗದನೆ ನಡುಗುತಲಿ ಕುದುರೆಯನು ಕಳಕೊಂಡು
ಪದ್ಮಾವತಿ ವಾರ್ತೆಯನ್ನು ಬಳಿಯ-
ಲಿದ್ದ ಬಕುಳಮಾಲಿಕೆಗೆ ಬೋಧಿಸಿ ಕಳಿ-
ಸಿದಾಕಾಶನಲ್ಲಿ ಚದುರಮಾತಿನ
ಚಪಲಕೊರವಂಜಿ ನೀನಾಗಿ ಕಣಿಯ
ಹೇಳಲು ಎಲ್ಲಿ ಕಲಿತೆಯೊ ಮಹದೇವ

ತಿಂಡಲದು ಕರಸಿ ಕಾಣುತಲಿ ಲಕ್ಷ್ಮಿಯನಪ್ಪಿ
ಕೊಂಡು ಪರಮ್ಪುರುಷದಿಂದ
ಮಂದಗಮನೆಯೆ ನಿನ್ನ ಮಾತುಲಾಲಿಸಿ ಮಾಡಿ
ಕೊಂಡೆ ಪದ್ಮಾವತಿಯ ಅಂದೆಯೊ ಎಲೆ ದೇವ

ಆಕಾಶರಾಜ ಅನೇಕ ಹರುಷದಿ ಮಾಡೆ
ತಾ ಕನ್ಯಾದಾನವನ್ನು
ಹಾಕಿದ ರತ್ನಮಾಣಿಕ್ಯದ ಕಿರೀಟವನು
ಬೇಕಾದಾಭರಣ ಭಾಗ್ಯ
ಸಾಕಾಗದೇನೊ ಬಡವರ ಕಾಡಿ ಬೇಡುವುದು
ಶ್ರೀಕಾಂತ ನಿನಗೆ ಸರಿಯೆ ದೇವ

ಹೇಮಗೋಪುರದಿ ವಿಮಾನ ಶ್ರೀನಿವಾಸ
ದೇವರನು ನೋಡಿ ನಮಿಸಿ
ಕಾಮಿಸಿ ಕಂಡೆ ಹೊನ್ನೊಸ್ತಿಲು ಗರುಡ
ಗಂಬದ ಸುತ್ತ ಪ್ರಾಕಾರವೊ
ಸ್ವಾಮಿಪುಷ್ಕರಣಿಯಲಿ ಸ್ನಾನ ಪಾನವ ಮಾಡಿ
ನೋಡಿದೆನು ನಿನ್ನ ಭಕುತರ ದೇವ

ಪನ್ನಗಾದ್ರಿ ವೆಂಕಟನ್ನ ರಥ ಶೃಂಗಾರ
ವರ್ಣಿಸಲಳವೆ ನಮಗೆ
ಕಣ್ಣಾರೆಕಂಡೆ ಗರುಡೋತ್ಸವದಲಂಕಾರ
ಇನ್ನೆಲ್ಲು ಕಾಣೆ ಜಗದಿ
ಅನ್ನಪೂರ್ಣೆಯ ನೋಡೆ ಅಧಿಕ ಗಂಟೆಯ ನಾದ
ಎನ್ನ ಕಿವಿಗಾನಂದವೊ ದೇವ

ಪಾದದಲ್ಲೊಪ್ಪೋ ಪಾಗಡಾರುಳಿ ಕಿರುಗೆಜ್ಜೆ
ಮೇಲಲೆವೊ ಪೀತಾಂಬರ
ನೀಲಮಾಣಿಕದ ಉಡಿದಾರವೊ ವೈಜಯಂತಿ-
ಮಾಲೆ ಶ್ರೀವತ್ಸದ್ಹಾರ
ಮೇಲಾದ ಸರಿಗೆ ಸರ ಪದಕವೊ ಕಮಲ-

ಗಿರಿಯ ಭೂವೈಕುಂಠವೆಂದು ತೋರುತ ನಿಂತ
ಶಿರದಿ ಕಿರೀಟ ಧರಿಸಿ
ಬಿಳಿಯ ತ್ರಿನಾಮ ಭೀಮೇಶಕೃಷ್ಣನ ಮುಖದಿ
ಹೊಳೆವ ಮೂರ್ತಿಯ ನೋಡಿ ಹೇ ದೇವ

೪

## ಧ್ರುವ

ಅರಸಿನ ಭೀತಿಯಿಂದ ಆತನ ಪಾದರಕ್ಷ
ಪರಿಚಾರಕನೊಬ್ಬ ಸತತ ಬಿಡದೇ
ಪರಮ ವಿಶ್ವಾಸದಲ್ಲಿ ಜೋಕೆ ಮಾಡಿದಂತೆ
ಹರಿ ನಿನ್ನ ಶರಣಾರ ಸರಸಿಜ ಭವಾದ್ಯರು
ನಿರತರವಂದಡಿ ತೊಲಗಿ ಪೋಗಾದೆ
ಪೊರವಾರು ಪರಿಪರಿ ಬಗೆಯಿಂದೊಲಿದೂ
ದುರಿತದ ಕಡಿಗೆ ನಿನ್ನ ನಂಬಿದವನ
ಕರಣಗಳೆರಗಗೊಡದೆ ಆವಾಗ
ಹರಿಭೀತಿ ನರನಿವ ನೀಚಾನಾದಾಡಾಗಲಿ
ಕರುಣಪಯೋನಿಧಿ ಭಕ್ತರಾಧೀನವಾದ
ಧೊರಿಯೆ ನಿನ್ನಾ ಬಲು ಲೀಲಿಗೆ ನಮೊನಮೊ
ಮರದೊಮ್ಮೆ ನೆನದಾಡೆ ಚನ್ನಾಗಿ ಚನ್ನಾಗಿ
ಬರುವ ಸ್ವಾತಂತ್ರ ಚಿನ್ಮಾತ್ರ ಮುನಿಸ್ತೋತ್ರ
ಧರೆಯೊಳು ನಿನ್ನಾ ಸರಿಯಾದ ದೈವವ
ಕುರುಹ ಕಾಣೆಸೊ ಕುಜನರಿಗೆ ಕುಠಾರ
ತಿರುವೆಂಗಳಪ್ಪ ತಿಮ್ಮಪ್ಪ ಶ್ರೀನಿವಾಸ
ಗಿರಿವಾಸ ವಿಜಯವಿಠಲ ವೆಂಕಟತಂದೆ
ಶರಣಾರು ಕರೆವ ಸೊಲ್ಲಿಗೆ ಸೋಲುವ ಮಹಿಮ

## ಮಟ್ಟ

ಎಲ್ಲಿದ್ದರು ನಿನ್ನವಗೆ ಭೀತಿ ಇಲ್ಲ

ತ್ರಿವಿಡಿ

ನಾನಾ ಯೋನಿಗಳಲ್ಲಿ ಬಂದು ಬೆಳೆದುಬಿಡದೆ
ನಾನಾ ದೇಶದ ಮ್ಯಾಲೆ ತಿರಗಿ ತಿರಗೀ
ನಾನಾ ಠಾವಿನಲಿ ವಾಸವಾಗಿ ಇದ್ದು
ನಾನಾ ಉದಕ ಧಾನ್ಯಾ ಸವಿದು ಉಂಡು
ನಾನಿದ್ದರು ದೇವ ಅಲ್ಲಲಿ ಪೊಂದಿದ
ಆ ನಿರ್ಜರರು ನಿನ್ನ ಪೊಂದಿದವ
ಜ್ಞಾನವೆ ಕೆಡದಂತೆ ರಕ್ಷಿಸುವರು ಸತತಾ
ಏನೆಂಬೆನೈ ನಿನ್ನ ಧೊರೆತನಕೇ
ನಾನೆಲ್ಲಿ ಸರಿಗಾಣೆ ತ್ರಿಲೋಕದಲ್ಲಿ ಜಗ
ಪ್ರಾಣನ್ನಾ ವಡಿಯಾನೆ ದಿವ್ಯಕಾಯ
ಜ್ಞಾನಾದ್ರಿ ವೆಂಕಟ ವಿಜಯವಿಠಲರೇಯಾ
ನೀನೆಂದವನಿಗೆ ನಿತ್ಯ ನೀನೆ ಬೆನ್ನು

ಅಟ್ಟ

ಕಾಮಂಜುತಲಿದೆ ಕ್ರೋಧಂಜುತಾಲಿದೆ
ಆಮದ ಮೋಹ ಮತ್ಸರ ವಂಜುತಲಿದೆ
ತಾಮಸ ಜನಗಳು ವಮ್ಯಾದರೂ ನಿನ್ನ
ನಾಮಾವ ಕೇಳುತಲಂಜುತಲಿಪ್ಪರು
ಸ್ವಾಮಿ ತೀರ್ಥವಾಸಾ ವಿಜಯವಿಠಲ ವೆಂಕಟ
ಈ ಮಹಿಯೊಳು ನಿನ್ನ ಧೊರೆತನಮಿಗಿಲೊ

ಆದಿ

ಜಗತ್ಪಾವನ ಜಗಜ್ಜೀವನ
ಜಗತ್ಕವನ ಕಾವನ್ನೈಯ್ಯಾ
ಜಗದ ಜಗದ ಜೀವನ

ಜಗವ ಆಡಿಸುವೆ ಜಗವೆ ನಿನ್ನ ಭೀತಿಯಲ್ಲಿ ಚಲಿಸುತಿಪ್ಪ
ಜಗವ ಬಲ್ಲಿ ನಿನ್ನಾ ಸರ್ವ ಜಗವರಿಯದು
ಜಗವೆಲ್ಲ ನಿನ್ನ ಭಕ್ತನ ಪಾಲಿಸುತಿಪ್ಪದು
ಜಗವೆ ನಿನ್ನಯ ಗುಣಂಗಳೆಣಿಸುವದೂ
ಜಗದಾ ಧೊರಿಯೆ ಖಗಗಿರಿ ವೆಂಕಟವಿಜಯವಿಠಲ ಪರಮದಂ
ಜಗವೇ ನಿನ್ನಾಧೀನವಯ್ಯಾ

ಜತೆ

ಅರಸಿನಿಂದಲಿ ಅಧಿಕ ಭೃತ್ಯನಿಗೆ ಪಾಲಿಸುವ
ಹಿರಿಯಾರಿಪ್ಪರು ಬಿಡದೆ ವಿಜಯವಿಠಲ ಧೊರಿಯೆ

೫

ನೀಲಾಂಬರಿ

ಅರಳಿದ ಕೆಂದಾವರೆಯ ಇರವ ಧಿಕ್ಕರಿಸುವ
ಗಿರಿಯ ತಿಮ್ಮಪ್ಪರಾಯನ ಚರಣಗಳ ಕಂಡೆನಾ
ಅರುಣ ತಳದಲಿಪ್ಪ ಅಂಕುಶ ಧ್ವಜವಜ್ರಾದಿ
ಸುರುಚಿರ ರೇಖೆಗಳ ಸೊಬಗ ಕಂಡೆ ನಾ
ಬೆರಳ ಸಾಲ್ಗಳ ಮೇಲೆ ಬೇರೆ ಬೇರೆ ತೋರುವ ಭಾ
ಸುರ ನಖಾಮಣಿಗಳ ಕಿರಣಗಳ ಕಂಡೆ ನಾ
ಕಿರುಗೆಜ್ಜೆ ಕಡೆಯ ಪೆಂಡೆಯದ ಪ್ರಭೆಯ ಕಂಡೆನಾ
ಕರಿಯ ದಂತವ ಪೋಲ್ವ ಜಂಘೆಗಳ ಕಂಡೆನಾ
ಎರಡು ರನ್ನದ ಕನ್ನಡಿಯ ತೆತ್ತಿಸಿದವೊಲು
ಮುರಹರನ ಮೋಹನದ ಜಾನುದ್ವಯವ ಕಂಡೆನಾ
ಉರುಟು ಕದಳಿಯ ಕಂಬದಂತೆ ವರ್ತುಳವಾದ
ಹರಿಯ ಪೀವರ ತೊಡೆಗಳ ಕಂಡೆ ಕನಸಿನಲಿ
ವರ ಪೀತಾಂಬರ ಕಾಂಚಿ ಕಿಂಕಿಣಿ ಜಾಲಗಳಿಂದ

ಸರದಿಂ ಮಿಂಚುವ ಪೀತಾಬುರಸ್ಥಳವ ಕಂಡೆನಾ
ತ್ರಿರೇಖೆಗಳಿಂದೊಪ್ಪುವ ಶಂಖದಂದದ
ಕರುಣಿ ವೆಂಕಟೇಶನ ಕಂಧರವ ಕಂಡೆನಾ
ಕರಚತುಷ್ಟಯದಲ್ಲಿ ಶಂಖಚಕ್ರಗಧೆ ಪದುಮ
ವರ ಅಭಯಗಳ ಕಂಡೆ ಕರ್ಣಕುಂಡಲವ ಕಂಡೆ ನಾ
ಸರಸ ಬಿಂಬಾಧರ ಸುಸ್ಮಿತ ನಾಸಪುಟದ ಕ
ಸ್ತುರಿ ನಾಮದ ಸರಸಿಜನಯನಗಳಿಂದೆಸೆವ ಸಿರಿಮೊಗವ ಕಂಡೆ
ಕುರುಳು ಕೂದಲು ಫಾಲ ಸಿಂಗಾಡಿಯಂತಿಪ್ಪ ಪುರ್ಬು
ಕೂರ್ಮನಂದದಿ ಗಲ್ಲ ಚುಬುಕ ಚುಬುಕಾಗ್ರದಿಂ
ಸಿರಿಯರಸ ಹಯವದನ ಶೇಷಗಿರಿ ಅರಸನ ಕಿರೀಟವ
ಪರಿಪರಿಯ ಸೊಬಗ ನಾ ಕಂಡು ಕೃತಾರ್ಥನಾದೆ ನಾ

## ಮಟ್ಟ

ಇಂದಿನ ದಿನ ಸುದಿನ ಗೋವಿಂದನ ಕಂಡ ಕಾರಣ
ಹಿಂದಿನ ಪಾಪ ವೃಂದವು ಬೆಂದುಹೋಯಿತು ಎನಗೆ
ಮುಂದಿನ ಮುಕುತಿ ದೊರಕಿತು
ತಂದೆ ಹಯವದನನೊಲವಿಂದ

## ತ್ರಿಪುಟ

ಪಾಪಕಂಜೆನೊ ಸಂತಾಪಕಂಜೆನೊ ನಾನು
ಪಾಪಿಜನರ ಬಲು ಕೋಪಕಂಜೆನೊ ನಾನು
ಆಪತ್ತಿಗಂಜೆ ಯಮನ ಪಾಶಕಂಜೆನೊ
ಶಾಪಕಂಜೆನೊ ಅನ್ಯರ ಪಾಟಿಮಾಡೆನೊ
ತಾಪಸರಿಗೊಲಿದ ಶ್ರೀಪತಿ ಹಯವದನ
ಆ ಪಾದ ಪದುಮದ ನೆನಹೊಂದಿದ್ದರೆ ಸಾಕು

## ರೂಪಕ

ಗುರು ಭಕುತಿಯಿರಬೇಕು ಹಿರಿಯರ ಕರುಣವು ಬೇಕು

ಪರಿಪರಿಯ ವ್ರತಬೇಕು ಸಿರಿಪತಿ ಹಯವದನನ
ಪರಮಾನುಗ್ರಹಬೇಕು ವಿಷಯನಿಗ್ರಹಬೇಕು

ಝಂಪೆ

ಹರಿ ಸಗುಣ ಸಾಕಾರ ಸಕಲ ಸುರರೊಡೆಯ ನಿ –
ರ್ಜರರೆಲ್ಲ ಹರಿಯ ಕಿಂಕರರೆಂದರಿಯ ಬೇಕು
ಮರಣಜನನ ದೋಷಗಳಿಗತಿ ದೂರತರನೆನಿಪ
ಸ್ಮರಣೆ ಸಂತತಬೇಕು ದುರಾಚಾರ ಬಿಡಬೇಕು
ಸಿರಿ ಹಯವದನ ಶೇಷಗಿರಿ ಅರಸನ
ಸ್ಮರಣೆಯಿದ್ದವನು ಸಂಸಾರ ಭಯವನುತ್ತರಿಸುವ

ಆದಿ

ಶ್ರೀನಾಥ ಪ್ರಭುವೆತ್ತ ಹೀನಯೋನಿಗಳೊಳು
ನಾನಾದುಃಖಗಳುಂಬ ಹೀನ ಮಾನವನೆತ್ತ
ಭಾನುಮಂಡಲವೆತ್ತ ಶ್ವಾನನುಬ್ಬರವೆತ್ತ
ಮಾನವ ಹರಿ ನಾನೆಂಬುದ ನೆನೆಯದಿರು
ದಾನವಕುಲವೈರಿ ಹಯವದನ ವೆಂಕಟ
ಶ್ರೀನಿವಾಸನ ದಾಸರ ದಾಸನೆನಿಸಿಕೊ

ಏಕ

ಕೈವಲ್ಯವನೀವ ನಮ್ಮ
ಶ್ರೀವಲ್ಲಭನ ಕೈಯಿಂದ
ನೀವೆಲ್ಲ ಕ್ಷುದ್ರವ ಬೇಡಿ
ಗಾವಿಲನ ಪೋಲದಿರಿ
ಸಾವಿಲ್ಲದ ಮುಕುತಿ ಪಥವ
ಬೇಡಿಕೊಳ್ಳಿರೊ
ನೋವಿಲ್ಲದಂತೆ ಸುಖಿಸಬಲ್ಲ

## ಅಟ್ಟ

ಗಾತ್ರವ ಬಳಲಿಸಿ ಸ್ತೋತ್ರವ ಪಾಡುತ್ತ
ಯಾತ್ರೆಯ ಮಾಡಿ ವೆಂಕಟೇಶನ ಮೂರ್ತಿಯ
ನೇತ್ರದಿ ನೋಡಿ ತಮ್ಮಿಷ್ಟವ ಪಡೆವ ಸ –
ದ್ಭಕ್ತರ ಕಂಡು ನಿನ್ನಮನದ ಭ್ರಮೆಯ ಬಿಡು
ದೈತ್ಯ ಪೌಂಡ್ರಕನ ಮತವ ನೆಚ್ಚಿ ಕೆಡಬೇಡ
ಚಿತ್ರ ಚರಿತ್ರ ಹಯವದನನೊಲಿಸಿಕೊ

## ಆದಿ

ಡಿಳ್ಳಿಯರಾಯನ ಕಂಡು ಪುಲ್ಲಿಗೆಯ ಬೇಡುವರೆ
ತಲೆಯೂರಿ ತಪಸು ಇದ್ದಲ್ಲಿ ಸಾಧಿಸಿಕೊಳ್ಳಿರೊ
ಕ್ಷುಲ್ಲಕರೆಂಜಲುಂಡು ಬಾಳ್ವರ ನೋಡು ಲಕ್ಷುಮಿ
ವಲ್ಲಭನಲ್ಲದೆ ಹೀನ ಫಲದಾಸೆ ಸಲ್ಲದಯ್ಯ
ಚೆಲ್ವ ಹಯವದನ ತಿಮ್ಮನಲ್ಲದೆ ಕೈವಲ್ಯಕೆ
ಹಲ್ಲು ಹಂಚಿಗೆ ಬಾಯಿತೆರದಂತೆ ಅಲ್ಲಲ್ಲಿಗೆ ಪೋಗಾದಿರಿ

## ರೂಪಕ

ಹನುಮಂತನ ನೋಡು ತನುಮನಧನಂಗಳ
ಶ್ರೀನರಸಿಂಹಗರ್ಪಿಸಿದ
ಪ್ರಹ್ಲಾದನ ನೋಡು
ಅನುದಿನ ವನದಲ್ಲಿ ತಪವ ಮಾಡುವ
ಮುನಿಜನರಕಂಡು ನಿನ್ನಮನದ ಭ್ರಮೆಯಬಿಡು
ಘನಮಹಿಮ ವೆಂಕಟಪತಿ ಹಯವದ –
ನನ ಭೃತ್ಯರ ಪರಿಚಾರಕರ ಭೃತ್ಯನೆನಿಸಿಕೊ

## ಜತೆ

ತಿರುಮಲೆರಾಯ ತ್ರಿವಿಕ್ರಮ ಮೂರುತಿ
ಸಿರಿ ಹಯವದನನ ಚರಣವೆ ಗತಿಯೆನ್ನು

ಓ

ಸೇವಿಪ ಜನರಿಗಮರತರುವೆನಿಸಿ ಧ
ರಾವಲಯಾಖ್ಯ ದಿವಿಯೊಳೆಸೆವ

ಆವನಂಘ್ರಿಜಲ ನಿಖಿಲಜಗತ್ತಿಗೆ
ಪಾವನತಮವೆಂದೆನಿಸುವುದು
ಶ್ರೀವಿಧಿಭವ ಶಕ್ರಾದ್ಯರು ಆವನ
ಸೇವಕಜನರೆಂದೆನಿಸುವರು
ದೇವೋತ್ತಮ ತಾನೆನಿಸಿ ನಿಖಿಳ ಜಡ
ಜೀವ ಭಿನ್ನ ಕರ್ಮವ ಮಾಳ್ಪ
ಸ್ಥಾವರ ಜಂಗಮರೊಳಗೆ ನೆಲೆಸಿ ವೇ
ದಾವಳಿಯಿಂದ ತುತಿಸಿಕೊಂಬ

ಮಾತರಿಶ್ವನೊಡನಹಿಪ ನುಡಿಯೆ ಸ
ತ್ವಾತಿಶಯವ ತೋರೆನಲಾಗ
ಜಾತರೂಪ ಶೈಲಾತ್ಮಜೆನಿಪ್ಪಿರೆ
ವೀತಿಹೋತ್ರಸಖ ಕಿತ್ತೊಗೆಯೆ
ವೀತಕರ್ಣನಳವಳಿದು ತುತಿಸಲು ನಿ
ಕೇತನತ್ರಯದೊಳಿಳುಹಿ ಬೇಗ
ಧಾತ ಮಹಿಳೆ ತೀರ್ಥಾದಿ ಭೂಲಕ್ಷ್ಮೀ ಸ
ಮೇತನಾಗಿ ಮೋದಿಸುತಿಪ್ಪ

ವೃದ್ಧಭೂಸುರನ ಒಯ್ದು ಸಲಿಲದೊಳ
ಗದ್ದಿ ಕುಮಾರತ್ವವನಿತ್ತ
ಅಧ್ವರವೆಸಗುವ ಋಷಿಗಳ ವೇದಾ
ಪದ್ಧಗಳ ತಿದ್ದಿ ಮಖವಕಾಯ್ದ
ಮಧ್ಯರಾತ್ರಿಯೊಳ್ಬೆಸಗೊಂಡ ನೃಪನ ಉ
ಪದ್ರವ ಕಳೆದಾಯುಧವಿತ್ತ
ಮೃದ್ಭಾಂಡವ ರಚಿಸಿದವಗೊಲಿದು
ಚೋದ್ಯವ ನೃಪತಿಗೆ ತೋರಿಸಿದ

ಕ್ಲೇಶದಿ ಭೂಮಿಪ ಸಂಸ್ತುತಿಸೆ
ಕೇಶವ ತಾನಸ್ಥಿಗಳ ತರಿಸಿ ಸು
ವಾಸಿನಿಶಿಶುಸಹ ಒಲಿದಿತ್ತ

ಮನೋವಾಕ್ಕಾಯದಿ ಕರ್ಮಜನ್ಯಫಲ
ದಿನದಿನಗಳಲಿ ಸಮರ್ಪಿಸುವ
ಮನುಜೋತ್ತಮರಾಧಿವ್ಯಾಧಿ ದು
ರ್ಜನುಮಗಳೆಲ್ಲವ ಪರಿಹರಿಪ
ಕುನರರಿಗಲಭ್ಯನು ಕುವಲಯದೊಳು
ಘನಕಾರಣಿಕ ಧರ್ಮಕಾಮಾರ್ಥಗಳ
ಜನರಿಗೆ ಸಲಿಸುವ ಜಗನ್ನಾಥವಿಠಲ
ಮನೆಮಾಡಿದ ಶೇಷಾಚಲವ

೭

ಕಾಂಬೋಧಿ

ಆದಿದೈವವೆ ನಿನ್ನ ಪಾದವೆ ನೆರೆನಂಬಿದೆನು ಬಿಡದಲೆ
ಆದರಿಸು ಕಾದುವಖಳರು ವಾಮದಲ್ಲಿ ಹುರಿಗೂಡಿ
ಬಾಧೆಬಡಿಸುವದು ನಾ ದಾರಿಗೆ ದೂರಲಿ
ಪೋದವನೇಕ ಜನನವಾದ ಕಾಲದಲ್ಲಿ
ಈ ದೇಹದ ಸುಖವಾದದ್ದು ಕಾಣೆನೊ
ವೇದಾರಿಸಿ ಕಾಣದ ಬಲು ಮಹಿಮಾನೆ
ಯಾದವಶಿರೋಮಣಿ ವಿಜಯವಿಠಲ ನಿನ್ನ
ಮಾಧುರ್ಯನಾಮವ ಉಣಿಸಿ ಬೀದಿ ಬಸವನ ಮಾಡೊ

ಮಟ್ಟ

ಅಪ್ಪನ ಅಪ್ಪಾನೆ ಗಿರಿಯ ತಿಮ್ಮಪ್ಪನೆ
ಸರ್ಪನತಲ್ಪನೆ ಸರ್ವರೊಳಿಪ್ಪನೆ

ಕಟುಕನ ಕೈಯ್ಯ ಶಿಲಿಕಿದ ಗೋವ್ಪೊಂದು ಸಂ
ಕಟ ಬಡುವಂತೆ ನನ್ನೊಳಗೆ ನಾನೆ ಬೀಳುವೆ ಅ
ಕಟಕಟ ನಿನಗಿನ್ನು ಕರುಣಬಾರದೆ ಸುರ
ಕಟಕದೊಡಿಯನೆ ನಿರಾಕರಿಸಿ ಎನ್ನನ್ನು ಯಿರಾ
ಕಟಕದೊಳಗೆ ಇಟ್ಟು ಯೆಳಸುವರೆ ಅ
ಕಟಕಟಾ ನಾನಾರಿ ಗಾಲವರಲಿ ಮರ
ಕಟ ಕುಣಿವಂತೆ ಮನಸು ಇಂದ್ರಿಯಗಳು ವ
ಕ್ಕಟವಾಗಿ ಕುಣಿದು ಕಂಗೆಡಿಸುತ್ತಿದೆ ವೆಂ
ಕಟಾಚಲವಾಸಾ ವಿಜಯವಿಠಲನೆ ಚೊ
ಕ್ಕಟ ಮಾರ್ಗವ ತೋರಿ ವಿಕಟಮತಿಕಳಿಯೋ

ಅಟ್ಟ

ದಾಸರ ಮನೆಯಲ್ಲಿ ವಾಸವಾಗಿದ್ದವ
ದಾಸರ ಬಳಿಯಲ್ಲಿ ಸೇರಿಕೊಂಡವನಾನೊ
ದಾಸರ ಮನೆಯಲ್ಲಿ ನೀರುಪೊತ್ತವನಾನು
ದಾಸರ ಮನೆ ಯಂಜಲೆಡೆ ತೆಗೆದವನಾನು
ದಾಸರುಂಡದ್ದು ಉಂಡುಬೆಳೆದವನಾನು
ದಾಸರ ಮನೆ ಮುಂದೆ ರಾತ್ರಿ ಜಾಗರನಾನು
ದಾಸರ ಪಂಚೆಲಿ ದಿನ ಕಳದವನಾನು
ದಾಸರ ನಂಬಿದ ದಾಸನು ನಾನು
ದೋಷಿ ನಾನಾದಡೆ ದೂಷರಹಿತಪುಣ್ಯ
ರಾಶಿ ಪುರಂದರ ದಾಸರ ಮ್ಯಾಲೆ ದಯಶರಧಿಯಿಟ್ಟು
ನೀ ಸಲಹುಯೆನ್ನ ಪಾಶವ ಬಿಡಿಸುತ್ತ
ಲೇಸುಪಾಲಿಪ ನಮ್ಮ ವಿಜಯವಿಠಲರೇಯ
ಬೀಸಿಬೀಸಾಟದಿರು ಬಿಂಕದ ದೇವ

ಆದಿ

ನಿನ್ನಾರು ವೊಪ್ಪುವರು ಪನ್ನಗಾರಿವಾಹನ್ನ ವಿಜಯವಿಠಲ
ಯನ್ನಬಿಡದೆ ಕಾಯೊ ಅನ್ನಾಥರೊಡಿಯಾ

ಜತೆ

ದುರುಳನೆನದೆ ದುರ್ಜನರಿಗೆ ವೊಪ್ಪಿಸದೆ
ಪರಿಪಾಲಿಸಿ ಸಾಕು ವಿಜಯವಿಠಲರೇಯಾ

೮

ಆವದೇವರಿಗುಂಟೀವೈಭವ

ಸಾರ್ವಭೌಮ ನೀನೆ ಸಕಲ
ದೇವರೊಳಗೆ ಭಾವಜನಯ್ಯ

ಸಿರಿಯರೆಂಟುಮಂದಿ ನಿನಗೆ
ಅರಸಿಯರು ಕರುಣಶರಧಿ
ಸುರರು ಮೂವತ್ತುಮೂರುಕೋಟಿ
ಚರಣಸೇವಕರಯ್ಯ ಹರಿಯೆ

ಅನುದಿನವು ಎಡೆಬಿಡದೆ ಮನು
ಮುನಿಗಳ ಸುಜನ ಸಂತತಿ
ಘನವೇದಘೋಷದಿಂದ
ನೆನೆದು ಪೂಜಿಪರಪರಿಮಿತ ಲೀಲೆ

ಕೋಟಿಸೂರ್ಯಪ್ರಕಾಶ ನಿನ್ನ
ಆಟ ಬಲ್ಲವರಾರು ಜಗದಿ
ಆಟವಾಡುವಿ ಅಗಮ್ಯಚರಿತ
ಸಾಟಿಯಿಲ್ಲದೆ ಧನವ ಕಲಿಸಿ

ಕರೆಸಿ ಅಸಮಭಕುತ ಜನರ

ವೆಂಕಟಾದ್ರಿಯಲ್ಲಿ ನಿಂದಿ
ವೆಂಕಟೇಶ ಕಿಂಕರಜನರ
ಸಂಕಟಹರ ಶ್ರೀರಾಮಪ್ರಭೋ

೯

## ಧ್ರುವ

ಇಂದಿರಾ ದೇವಿ ಗುಣಿಸಿ ಎಣಿಸುವೇನೆಂದು
ಒಂದುಸಾರಿ ನೋಡಲು ಬೆಡಗುತೋರಿದ ನಖ
ಅಂದು ಒಂದೊಂದು ಪರಿಪರಿ ವರ್ಣಂಗಳ ತೋರಿ
ಅಂದವಾಗಿ ಪೊಳದ ಮಾಯಾ ಲೀಲಾದ ನಖ
ಮಂದಮತಿಗಳು ನಮಿಸಲವರ ಪಾಪ
ವೃಂದಾವ ಕಳೆದು ಸುಜ್ಞಾನಕೊಡುವ ನಖ
ಸುಂದರನಾಮಾ ಸಿರಿ ವಿಜಯವಿಠಲ ನಿನ್ನ
ಸುಂದರ ನಖಗಳಿಗೆ ನಮೋನಮೊ ಎಂಬೆ

## ಮಟ್ಟ

ಬಲಿಯಮನಿಗೆ ಪೋಗಿ ನೆಲನ ದಾನವಬೇಡಿ
ಜಲಜಾಂಡಕೆ ಬೆಳೆದು ಬಲಿದ ಖರ್ಪರವನ್ನ
ಪ್ಪಳಸಿ ಸೀಳಿದ ನಖ
ಕಿಲಿಕಿಲಿನಗುತ ಗೋವಳ ಸತಿಯರ ಮೊಗ್ಗ
ಮೊಲೆಯಮೇಲೆ ತುಳಿವುತ್ತವಲಿದು ವತ್ತಿದ ನಖ
ಕಲಕಾಲ ಮುನಿಗಳು ವೊಲಿಸಿಪೊಲಿಸಿ ನೋಡೆ
ನೆಳಲಗಾಣದೆ ಪೋಗಿ ತೊಳಲಿ ತುತಿಪ ನಖ
ಸುಲಭ ಮಹಾವೀರ್ಯ ವಿಜಯವಿಠಲ ನಿನ್ನ
ಪೊಳೆವನಖಗಳಿಗೆ ಗೆಲುವದಾವದು ಇಲ್ಲ

## ರೂಪಕ

ಚಿಣ್ಣಾಟಿಕೆ ಗೋಲಿ ಸೆಗದು ಚಿಮ್ಮಿದ ನಖ
ಪನ್ನಗಶಯನ ವ್ಯಕ್ತ ವಿಜಯವಿಠಲ
ಚನ್ನಿಗನಪಾದ ಪಾವನ್ನವಾದ ನಖ

ಝಂಪೆ

ಸಕಲ ಬೊಮ್ಮಾಂಡಗಳ ವ್ಯಾಪಿಸಿಕೊಂಡ ನಖ
ಅಕಳಂಕ ಚರಿತವಾದ ಆದಿಅನಾದಿ ನಖ
ಭುಕುತಿಭಕುತಿ ಯುಕುತಿಶಕುತಿ ಕೊಡುವ ನಖ
ಮುಕುತಿಬೇಡಿದರೆ ಚಚ್ಚಾರದಲ್ಲಿ ನೀವ ನಖ
ಕಕುಭಾ ಹತ್ತಕೆ ಮಿಾರಿ ಬೆಳಗುತೋರುವ ನಖ
ಸಕಲೇಶ ಚತುರ್ಭುಜ ವಿಜಯವಿಠಲರೇಯನ
ವಿಕಸಿತ ಕೆಂದಳಕೆ ಸದೃಶವಾದ ನಖ

ತ್ರಿವಿಡಿ

ಮಂದಾಕಿನಿಯ ಪಡದು ಮಹ ವೇಗದಿಂದಲಿ
ಇಂದುಮೌಳಿಯ ಕಾಯ ಪಾವನ್ನ ಮಾಡಿದನಖ
ಹಿಂದೆ ಕುರುರಣದಲ್ಲಿ ಸುತ್ರಾಮನಂದನನ
ಶ್ಯಂದನ ಎಳೆವ ವಾಜಿಯ ನಡಿಸಿದ ನಖ
ಸಂದೋಹ ಭಕ್ತರು ನಮಿಸಿ ಸ್ತೋತ್ರವಮಾಡೆ
ಚಂದದಿಂದಲಿ ಕೇಳಿ ಹಿಗ್ಗಿ ನಗುವ ನಖ
ಕುಂದನಾಮಾ ಸಿರಿ ವಿಜಯವಿಠ್ಠಲ ನಿನ್ನ
ನಂದದಾ ನಖದ ಲೀಲೇನೆಂದು ಬಣ್ಣಿಸುವೇ

ಅಟ್ಟ

ಗೋಕುಲ ಭೂಮಿಯ ಯಮುನಾನದಿಯತೀರ
ಸೋಕಿ ರಜದಿ ಪಾವನ್ನ ಮಾಡಿದ ನಖ
ಆ ಕಮಲಾಜಾಂಡವನಂತಾನಂತಾ
ನೇಕಬಗೆಯಿಂದ ಪೊಳಗೆತೋರುವ ನಖ
ಪಾಕಶಾಸನಾದಿ ಮುಕುಟಮಣಿಯ ಕಾಂತಿ

ಮುಕ್ತಾಮುಕ್ತ ಬ್ರಹ್ಮಾದಿಗಳು
ಸಿಕ್ಕಾದೆಂದು ಜಪಿಸುವನಖ
ಅರ್ಕಾಸೋಮ ಕೋಟಿಕಿರುಣಾ
ನಕ್ಕುಹಾಸ್ಯ ಮಾಡುವನಖ
ರಕ್ಕಸರ ಸಮುದಾಯದಾಯದಾ
ಸೊಕ್ಕುಮುರಿದು ಕಳವನಖ
ಅರ್ಕನಾಮಾ ವಿಜಯವಿಠಲ
ಭಕ್ತರಿಗೆ ವೊಲಿದನಖ

ಜತೆ.

ಅರ್ಚಿಪರ ಹೃದಯದೊಳಗೆ ಮಿನಗುವನಖ
ಅರ್ಚಿತ ವಿಜಯವಿಠಲರೇಯನ ನಖ

೧೦

ಮಧ್ಯಮಾವತಿ

ಇಂದು ನಾನೇನು ಸುಕೃತವ ಮಾಡಿದೆನೋ

ಮಂಗಳ ಮಹಿಮ ವೇಂಕಟ ಬಂದ ಮನೆಗೆ

ಹಾರ ಕೇಯೂರ ಹೊನ್ನುಂಗುರ ಬೆರಳು
ಹಾರದ ನಡುವೆ ಹಾಕಿದವೇಳು ಪದಕ
ತೋರಮುತ್ತಿನ ಕಂಠಮಾಲೆ ಸರಿಗೆಯು ಕೋ
ನೇರಿವಾಸ ವೇಂಕಟ ಬಂದ ಮನೆಗೆ

ಕಾಲಪೆಂಡಿಗೆಯು ರಕ್ಕಸರ ಹಾವಿಗೆಯು
ಮೇಲಾದ ವಜ್ರನವರತ್ನದ ಮಕುಟ
ವೀಳ್ಯದ ಬಾಯಿ ಕರ್ಪೂರದ ಕರಡಿಗೆಯು
ಮೇಲುಗಿರಿವಾಸ ವೇಂಕಟ ಬಂದ ಮನೆಗೆ

ತೆಗೆದುಟ್ಟ ಪೀತಾಂಬರ ಉಡುಗೆ ಕಠಾರಿ
ಯದುಗಿರಿವಾಸ ವೇಂಕಟ ಬಂದ ಮನೆಗೆ

ನೊಸಲ ಸುತ್ತಿದ ಪಟ್ಟೆ ಎಸೆವೊ ಕಸ್ತುರಿಯು
ವಶವಾದ ಅಮೃತದ ರಸ ಸವಿಮಾತು
ಎಸಳುಕಂಗಳ ನೋಟ ಹೊಸ ಪಂಚಬಾಣ
ಸುಕುಮಾರ ಸೊಬಗು ವೇಂಕಟ ಬಂದ ಮನೆಗೆ

ಕಲಿಯುಗದಲಿ ಶಂಖಚಕ್ರವ ಧರಿಸಿ
ಹದಿನಾಲ್ಕು ಲೋಕ ತನ್ನುದರದಲ್ಲಿಟ್ಟು
ಗರುಡನ ಏರಿ ಮೂರ್ಜಗವ ಮೋಹಿಸುವ
ಪುರಂದರವಿಠಲ ವೇಂಕಟ ಬಂದ ಮನೆಗೆ

೧೧

**ತೋಡಿ**

ಇನ್ನೆಂದಿಗೋ ನಿನ್ನ ದರುಶನ ಶೇಷಾದ್ರಿವಾಸ

ಪನ್ನಂಗಶಯನ ಪ್ರಸನ್ನರ ಪಾಲಿಪ
ಘನ್ನಮಹಿಮ ನೀನೆನ್ನನುದ್ಧರಿಸೊ

ವರಸುರಮುನಿಗಳ ವೃಂದನೆರಹಿದ ಯಾಗಗಳಿಂದ
ಪರಮಾದರದಿಂದಿರುವ ಸಮಯದಿ
ನಾರದಮುನಿ ಬಂದೊದಗಿ ನಿಂದ ಇ–
ದಾರಿಗರ್ಪಿತವೆಂದರುಹಿ ಮರಳೀತೆರಳಿದ
ಸುರಮುನಿವಚನದಿ ಭೃಗುಮುನಿವರ ಪೋಗಿ
ಹರವಿರಿಂಚಿಯರ ನೋಡಿದಾ ಉರುತರ ಕೋಪದಿ ನಿಲ್ಲುತ
ಪರಮ ಪುರುಷರಲ್ಲೆಂದೆನ್ನುತ – ವೈಕುಂಠವನ್ನೇ ಸಾರುತ
ಹರುಷದಿ ಶ್ರೀಹರಿ ಉರಗಶಯನನಾಗಿ
ಪರಮ ಯೋಗನಿದ್ರೆ ಮಾಡುತಾ–ಅರಿಯದಂತೆ ತಾ ನಟಿಸು

ಕರುಣೆಗಳುಂಟೇ ಶ್ರೀಹರಿ ಸರ್ವೋತ್ತಮಾ

ಸ್ವಾಮಿ ನೀ ನಿಜಧಾಮವನೆ ತೊರೆದೂ
ಸ್ವಾಮಿಕಾಸಾರ ತೀರದಿನಿಂದೂ ಧಾಮವನರಸಿ
ವಲ್ಮೀಕವನೆ ನೋಡಿ
ವಿಮಲ ಸ್ಥಳವಿದೆಂದು ಮನದಲಿ ಆನಂದದಿಂದಲಿ ಬಂದು ನಿಂದೆ
ಸನ್ಮುದವನ್ನೆ ತೋರುತ
ಕಮಲಭವ ಶಿವ ತುರು ಕರು ರೂಪದಿ
ಈ ಮಹಗಿರಿಯನ್ನ ಅರಸುತ–ಸ್ವಾಮಿ ನೀನಿಲ್ಲಿಹೆನೆಂದೆನ್ನುತ
ಕಾಮಧೇನು ಪಾಲ್ಗರೆಯುತಾ– ಈ ಮಹಿಮೆಯನ್ನೇ ಬೀರುತಾ
ಭೂಮಿಗೊಡೆಯ ಚೋಳನೃಪ ಸೇವಕನು
ಧೇನುವನು ತಾ ಹೊಡೆಯಲು
ಕಾಮನಯ್ಯ ನೀನೇಳಲು–ಭೀಮ ವಿಕ್ರಮವ ತೋರಲು
ಕ್ಷಮಿಸಿದೆ ನೃಪನದಯಾಳು
ಅಮಿತ ಸುಗುಣಪೂರ್ಣ ಅಜರಾಮರಣ
ನೀ ಮಸ್ತಕ ಸ್ಫೋಟನ ವ್ಯಾಜವ ತೋರಿ
ಪ್ರೇಮದಿ ಗುರು ಪೇಳ್ದೌಷಧ
ಕಾಮಿನೀ ಮೋಹವ ತೋರಿದೇ ವಿಡಂಬನ ಮೂರ್ತಿ

ಮಾಯಾರಮಣನೆ ಜೀಯಾ ಕಾಯುವೆ ಜೀವನಿಕಾಯಾ
ತೋಯಜಾಂಬಕ ಹಯವನೇರಿ ಭರದಿ ತಿರುಗಿ ತಿರುಗೀ
ವನವನೆಲ್ಲ ಮೃಗನೆವನದಿ ನಿಂದು ನೋಡಿದೇ
ಪ್ರಿಯಸಖಿಯರ ಕೂಡಿ ಪದುಮಾವತಿಯು ತಾ
ಹಯದಿ ಕುಳಿತ ನಿನ್ನ ನೋಡಲು
ಪ್ರಿಯಳಿವಳೆನಗೆಂದು ಯೋಚಿಸಿ
ಕಾಯಜಪಿತ ನಿನ್ನ ಹಯವನೆ ಕಳಕೊಂಡು
ಮಾಯದಿಂದ ನೀ ಮಲಗಿದೆ
ತಾಯಿ ಬಕುಳೆಯೊಳು ಪೇಳಿದೇ

[illegible]
ಶ್ರೇಯವೆಂದು ಆಕಾಶನನೊಪ್ಪಿಸಿ
ತಾಯಿಯಭೀಷ್ಟವನಿತ್ತ ಸ್ವರಮಣಾ

ಸಕಲ ಲೋಕೈಕ ನಾಥಾ-ಭಕುತರಭೀಷ್ಟಪ್ರದಾತಾ
ಭಕುತನಾದ ಆಕಾಶನೃಪತಿಯು ಬಕುಳೆ ಮಾ-
ತ ಕೇಳಿ ಅಭಯವಿತ್ತು ಮನ್ನಿಸಿ ಪದುಮಾವತಿಯ ಪರಿಣಯ
ಶುಕರ ಸನ್ಮುಖದಲ್ಲಿ ಅಕಳಂಕ ಮಹಿಮ-
ಗೆ ಕೊಟ್ಟನು ತಾ ಲಗ್ನಪತ್ರಿಕಾ
ಸ್ವೀಕರಿಸುವುದೀಕನ್ನಿಕಾ ಈ ಕಾರ್ಯಕೆ ನೀನೆ ಪ್ರೇ
ರಕಾ ತಾ ಕಳುಹಿದ ಪುಣ್ಯ
ಶ್ಲೋಕನು ಶೋಕರಹಿತ ಜಗ-
ದೇಕವಂದ್ಯ ಅವಲೋಕಿಸಿ ಪತ್ರಿಕವನ್ನು
ಸಕಲ ಸಾಧನವಿಲ್ಲಿನ್ನು
ಲೋಕೇಶ ಗರುಹ ಬೇಕಿನ್ನು
ಏಕಾಂಗಿ ನಾನು ಎನ್ನಲು
ಲೋಕಪತಿಯೆ ಸುರಕೋಟಿಗಳಿಂದಲಿ
ಈ ಕುವಲಯದಿ ನಿನ್ನಯ ಪರಿಣಯವೆಸಗಲು
ಲೋಕ ಜನಕೆ ಕಲ್ಯಾಣವ ತೋರಿದೆ
ಭಕುತ ಜನಪ್ರಿಯ ಶ್ರೀವತ್ಸಾಂಕಿತ

ಖಗವರವಾಹನ ದೇವಾ
ತ್ರಿಗುಣರಹಿತ ಜಗಕಾವಾ
ಅಗಣಿತ ಮಹಿಮ ಗೋಮಯನೆನಿಸಿ
ಬಗೆಬಗೆ ರೂಪವಧರಿಸಿ ಪರಮಾದರದಲಿ ಸುರರ ಪೊರೆಯ
ನಗಧರ ನೀನೀಗಿರಿಯೊಳು ನೆಲೆಸಿಹೆ
ಅಗಣಿತ ಸುರಗಣಕಿನ್ನರರು ಸಾಧ್ಯರು ತರುಫಲ
ಖಗ ಮೃಗ ರೂಪವ ಬಗೆಬಗೆ ಇಹೆ
ಪೊಗಳಲಳವೇ ಗಿರೀವರವು

ಜಗದದೇವ ರಾಜಿಸುವವನಾಗಿಹೆ
ಮಿಗಿಲೆನಿಸಿದ ಶ್ರೀ ವೆಂಕಟೇಶ
ಸದ್ಗುಣ ಸಚ್ಚಿದಾನಂದ ಮುಕುಂದ ಗೋವಿಂದಾ

೧೨

ಉದಯರಾಗ

ಈ ಜೀವವಿದ್ದು ಫಲವೇನು, ಚೆಲುವ

ರಾಜೀವಲೋಚನನ ನೆನೆಯದ ಪಾಪಿ ತನುವಿನಲಿ

ಅರುಣ ಉದಯದಲೆದ್ದು ಹರಿಯ ಸ್ಮರಣೆಯ ಮಾಡಿ
ಗುರುಹಿರಿಯರನು ಮನದಿ ನೆನೆದು ನೆನೆದು
ಪರಮ ಸುಖಿಯಾಗಿ ನದಿಯೊಳು ಮಿಂದು ರವಿಗರ್ಘ್ಯ
ವೆರೆಯದ ಕಡು ಪಾಪಿಯಾದ ಈ ತನುವಿನಲಿ

ಹೊನ್ನ ಕಲಶದಲ್ಲಿ ಅಗ್ರೋದಕವ ಶ್ರೀ ಹರಿಗೆ
ಚೆನ್ನಾಗಿ ಅಭಿಷೇಕವನ್ನು ಮಾಡಿ
ರನ್ನದುಡಿಗೆಗಳುಡಿಸಿ ರತ್ನಗಳನಳವಡಿಸಿ
ಕಣ್ಣಿನಲಿ ನೋಡಲರಿಯದ ಕಪಟಿ ತನುವಿನಲಿ

ತುಲಸಿ ದಳಗಳು ಪುಷ್ಪಮಾಲಿಕೆಯು ನವರತ್ನ
ಹೊಳೆವ ಕೌಸ್ತುಭವು ಕೊರಳಲ್ಲಿ ಪದಕ
ನಳಿನಾಕ್ಷಗಿಟ್ಟು ಕರ್ಪೂರದಾರತಿಯೆತ್ತಿ
ಕಣ್ಣಿನಲಿ ನೋಡಲರಿಯದ ಕಪಟ ತನುವಿನಲಿ

ಪರಿಪರಿಯ ಭಕ್ಷ್ಯ ಪಾಯಸ ಶಾಕ ಶಾಲ್ಯಾನ್ನ
ಹರುಷದಿಂ ದಧಿಖಂಡ ಕ್ಷೀರ ಘೃತವು
ಪರಮಪುರುಷಗೆ ತಂದು ನೈವೇದ್ಯವನೆ ಮಾಡಿ
ಹರುಷದಲಿ ಕೈಮುಗಿಯಲರಿಯದ ಕಪಟ ತನುವಿನಲಿ

ಕಣ್ಣಿನಲಿ ನೋಡಲರಿಯದ ಕಪಟ ತನುವಿನಲಿ

೧೩

ಸಾರಂಗ

ಈತನಾತುಮ ಮೂರುತಿ ಈತನಂತರಾತುಮಾ
ಈತನೆ ಪರಮಾತುಮ ಈತನೆ ಜ್ಞಾನಾತುಮ

ಈತನೆ ಅನ್ನಮಯಾದಿ ಮೂರುತಿ
ಈತನೆ ಪ್ರಾಜ್ಞಾದಿ ಮೂರುತಿ ಕಾಣೊ
ಈತನೆ ಅಂಗುಷ್ಟ ಪರಿಮಿತ ಮೊದಲಾತ
ಈತನೆ ಹೃದಯಾಂಬುಜ ನಿವಾಸ ಪ್ರ
ಖ್ಯಾತ ಮೂರುತಿ ಜಗಕಾಶ್ಚರ್ಯ ಮೂರುತಿ
ಈ ತಿರುವೆಂಗಳ ತಿಮ್ಮಪ್ಪ ಎನ್ನಪ್ಪ
ವಾತವಂದಿತ ಸಿರಿ ವಿಜಯವಿಠಲ ಪರಮಾ
ಪ್ರೀತನು ಸಕಲಸುರ ವ್ರಾತಕನುದಿನ

ಮಟ್ಟ

ಹರಣದೊಳಗೆ ನೀನು ಇರಳುಹಗಲು ಬಿಡದೆ
ತರುಣಿ ಪುರುಷವೇಷ ಧರಿಸಿದೆ ಪ್ರತಿದಿನ
ಮೆರೆದು ಉನ್ನತದಲ್ಲಿ ಸುರರೊಳು ಪೆಸರಾದ
ವರಗಿರಿಯ ವಾಸ ತಿರುವೆಂಗಳೇಶ ವಿಜಯವಿಠಲಧೀಶಾ
ಕರುಣಾಕರ ಸುಜನರ ಮನೋರಥ ದೇವಾ

ತ್ರಿವಿಡಿ

ಅನಿರುದ್ಧಾದಿ ಮೂರುತಿ ಅಜಾದಿ ಮೂರುತಿ
ಅನಿಮಿಷರೊಳಗೆ ಬಲುಪೊಳವ ಮೂರ್ತಿ
ಮನ ಮೊದಲಾದ ಇಂದ್ರಿಯಂಗಳವರಲ್ಲಿ

ಕೇಶವಾದಿ ತತ್ವನ್ಯಾಸದವರೊಳು
ವಾಸವಾಗಿದ್ದ ಹೃಷಿಕೇಶ ಮೂರುತಿ
ಸಾಸಿರ ಮೂರುತಿ ವಾಸುದೇವಾ ಆ
ಕಾಶ ಹೃದಯದೊಳು ಸುಸೂವಾ ಮೂರುತಿ
ಸಾಸಿರಾಸೀತಿ ಭೂಷಣಂಗುಲಿಪರ್ವ ಈ ಸಮಸ್ತ ಮೂರ್ತಿ
ಶೇಷಗಿರಿ ವೆಂಕಟೇಶ ವಿಜಯವಿಠಲ
ಲೇಶ ಮೂರ್ತಿ ಪಂಚಕೋಶದ ಮಹಿಮಾ

ಆದಿ

ಶರೀರದೊಳಗೆ ನಖ ಶಿರಸಾ ಪರಿಯಂತ
ಭರಿತವಾಗಿ ರೋಮಾಂತರದ ಮಧ್ಯದಲಾವಾಂ
ತರದ ಸಹಿತ ನಿರಂತರ ಮಾಯವಾಗಿಪ್ಪೆ
ಹರಿಯೆ ನೀನ ಇಲ್ಲಿ ತಿರುಮಲನಾಗಿ ಮೆರವೆ
ವರಗಿರಿವಾಸ ಶ್ರೀನಿವಾಸ ವೇಂಕಟೇಶ
ಸುರತರುವ ಭಕ್ತರಿಗೆ ನಿರ್ಜರನಿಕರಪಾಲಾ

ಜತೆ

ತಿರುವೆಂಗಳೇಶನಂತರದೊಳು ಚಿಂತಿಸಿ
ವರಗಿರಿ ಸಿರಿವಿಜಯವಿಠಲನ ಮನದಲ್ಲಿ ಕಂಡೆ

೧೪

ವರಾಳಿ

ಎಂದು ಕಾಂಬೆನು ಎನ್ನ ಸಲಹುವ
ಬಂಧುಬಳಗ ನಮ್ಮಪ್ಪನ ತಿರುಪತಿಲಿಪ್ಪನ
ವರಹ ತಿಮ್ಮಪ್ಪನ

ಎನ್ನೊಡೆಯ ಪೂಗಿಳ ನಾ

ಸ್ವಾಮಿ ಪುಷ್ಕರಣಿಯಲಿ ಸ್ನಾನ ನೇಮ –
ವ ಮಾಡುವೆ ಪುಣ್ಯಕ್ಷೇತ್ರವ ನೋಡುವೆ
ಹಯವದನನ ಕೊಂಡಾಡುವೆ

೧೫

ಎಷ್ಟು ಹೇಳಲಿ ವೆಂಕಟಗಿರಿಯ
ದೃಷ್ಟಿಗೆ ಬಹು ಸಿರಿಯ
ಬೆಟ್ಟವನೆ ಮನಸಿಟ್ಟೇರಲು ಬೇಡಿದ
ಇಷ್ಟಾರ್ಥಗಳ ಈಡಾಡುವ ದೊರೆಯ

ಚಿತ್ರವಿಚಿತ್ರದ ಮಹಾದ್ವಾರ
ಚೆನ್ನದ ಗೋಪುರ
ಸ್ವಚ್ಛವಾದ ಸ್ವಾಮಿ ಪುಷ್ಕರಣಿಯ ತೀರ
ಸುತ್ತಲು ಪ್ರಾಕಾರ
ಹೆಚ್ಚಿನತೀವ್ರತವೆ ಮನೋಹರ
ಮಾರುವ ವಿಸ್ತಾರಸ
ಚಿತ್ತಜನಯ್ಯನ ಶೈಲವೆ ದೂರದಿಂ –
ದ್ದತ್ತಿ ಬರುವುದೀತನ ಪರಿವಾರ

ರತ್ನಮಾಣಿಕ್ಯದ ಕೇಯೂರ
ಕಟ್ಟಿದ ಉಡಿದಾರ
ಉಟ್ಟಿದ್ದ ನಿರಿಜರಪೀತಾಂಬರ
ಕೌಸ್ತುಭ ಮಣಿಹಾರ
ಗಟ್ಟಿ ಕರಕಂಕಣ ಕುಂಡಲಧರ
ಚತುರ್ಭುಜದಲಂಕಾರ
ವಕ್ಷಸ್ಥಳದಲ್ಲಿ ಹೊಂದಿದ ಶ್ರೀಮಹಾ–
ಲಕ್ಷ್ಮೀದೇವಿಯರಿಂದೊಲಿವ ಶೃಂಗಾರ

ಬೇಕಾದ ಭಜಕರ ಭವ ಪಡಿಪಾಟ
ಬಿಡಿಸುವ ಯಮಕಾಟ
ಕೋಟಿಜನರ ಓಡ್ಯಾಟವೆ ನಮ್ಮ ಕಿ –
ರೀಟಿಯ ಸಖ ಕೇಶವನ ಮಂದಿರದೊಳ್

ತಪ್ಪುಗಾಣಿಕೆಯ ಬೇಡುವ ಸರ್ಪ
ಶೈಲದ ತಿಮ್ಮಪ್ಪ
ಕಪ್ಪವ ಕಾಸು ಕವಡೆ ಮುಡುಪು
ಹಾಕದೆ ತಾನೊಪ್ಪ
ಜಪ್ತಿಸಿ ನೋಡುವ ಜನರ ತಪ್ಪ
ಹುಡಿಕ್ಯಾಡುತಲಿಪ್ಪ
ಅಪ್ಪ ಮಹಿಮಾನಂತ ಮೂರುತಿ ತಾ–
ನೊಪ್ಪಿದರೊಲಿದುಕೊಡುವ ಸಾರೂಪ್ಯ

ದೇಶದೇಶದೊಳು ಈತನ ವಾರುತೆಯು
ತುಂಬಿದ ಕೀರುತಿಯು
ಆಸೆಯ ದೈವ ಈ ಮೂರುತಿಯು
ಫಲ್ಗುಣ ಸಾರಥಿಯು
ಲೇಸಾಗಿ ಜನರ ನೋಡುವ ರತಿಯು
ಕರ್ಪೂರದಾರತಿಯು
ವಾಸವಾಗಿರುವ ಈ ಶೇಷಾದ್ರಿಯಲಿ ಭೀ–
ಮೇಶ ಕೃಷ್ಣ ಶ್ರೀನಿವಾಸ ಕೃಪಾಳು

೧೬

ಭೈರವಿ

ಎಸವೊ ಪೊಸರತುನ ರಂಜಿಸುವ ಮಕುಟಮೌಳಿ
ಅಸಿತ ಸುಳಿಗುರುಳ ಶೋಭಿಸುತಿರೆ ಮಧುಪನಂತೆ

ಶಶಿವದನ ನಸುನಗೆ ರಸಸುರಿವ ಮಾತು
ಮಿಸುಣಿಪಾವಳಿದಂತ ಕಂಬುಕೊರಳ ರೇಖೆ
ಹಸನಾದ ಉರನಾಭಿ ನಡಿವೆ ಸರ್ವಲೋಕ
ಬಸುರೊಳಗೆ ವೊಪ್ಪುತಿರೆ ಕಂಡೆ ಕಟಿಕರ ಯುಗ್ಮಾ
ಪಸರಿಸೂವ ಊರು ಜಾನುಜಂಘೆ ಪದನಖಾ
ನಿಶಿಚರನಾಶಾ ಲೋಕಾತ್ರಯಾಶ್ರಯಾ ನಾಮಾ
ಝುಷಕೇತನಯ್ಯಾ ಸಿರಿ ವಿಜಯವಿಠನ
ಅಸಮಸ ಮೂರ್ತಿಯಾ ಕನಸಿನಲ್ಲಿ ಕಂಡೆ

## ಮಟ್ಟ

ವೀರಮುದ್ರಿಕೆ ಬೆರಳ ಚಾರು ಶೋಭಿತಪೆಂಡೆ
ಭೋರಗರವ ಗೆಜ್ಜೆ ತಿರಿತಿರಿಲಿ ಝೇಂಕಾರದನೂಪೂರ
ಗಾರಾದ ಉಡುದಾರ ಹೀರ ಕೌಂಸ್ತುಭ ತುಲಸೀ
ಹಾರಾ ಪುಲಿಯುಗರು ಹೇರೂರಾದಲ್ಲಿ ಕೇಯೂರ ಸಿರಿದೇವಿ
ವಾರಣದಿಂದ ಬಂಗಾರ ಕಂಕಣ ಮುದ್ರೆ
ತೋರುವ ಸರ್ವಾಲಂಕಾರ ಚಲುವನಾ
ಪಾರಾನೋಡಿದೆ ನಖಾ ಶಿರಸ ಪರಿಯಂತಾ
ಪಾರಮಹಿಮಾ ಸಮಿಾರಣ ನಾಮಕನು ವಿಜಯವಿಠಲವನ್ನು
ಪಾರನನೋಡಿದೆ ಸಂಸಾರಹರ ವಾಗಿ
ಸೇರುವೆ ಗತಿಯಲ್ಲಿ ಆರಾಧನೆಯೀಯಿಂದ

## ತ್ರಿವಿಡಿ

ಪೊಂಬಟ್ಟೆ ವಸನವ ನಂದಮಹಿಮುಡವ ಕೈಯ್ಯ
ಕೊಂಬು ಕೊಳಲು ಕೋಲು ತುತ್ತುರಿ ಮವ್ವುರಿ
ಭೊಂ ಭೊಂ ಭೋಂ ಎಂದು ಧ್ವನಿ ಮಾಡಿ ಊದುವ ರತ್ನ
ಗಂಬಳಿ ಕೊಪ್ಪಿಲಿ ತ್ರಿಭಂಗಿಯನ್ನು ಹೂಡಿ

ಸಂಬಲು ಬೆಂಬಲವಾಗಿ ಪಾಲಿಪ ಪತಿ
ಬಿಂಬ ಹೇಮಾಂಗ ಶ್ರೀ ವಿಜಯವಿಠಲರೇಯಾ

ಅಟ್ಟ

ಗಿರಿಯ ಧರಿಸಿ ನಿರ್ಜರರ ಪೊರೆದಾ ನೀತ
ಗಿರಿಜೇಶಗೆ ಬಂದ ಉರಿಯ ಕಳೆದ ನೀತ
ಗಿರಿಯ ಬೆರಳಲೆತ್ತಿ ತುರವ ಕಾಯಿ
ಗಿರಿಯ ವೈರಿಯ ನಂದನನ ಪ್ರೀತ ನೀತ
ಗಿರಿಯ ತಂದವಗತಿ ಕರುಣ ಮಾಡಿದ ನೀತ
ಗಿರಿಯ ಬಾಯಲಿಕಟ್ಟ ಜಗವ ಸಾಕುವ ನೀತ
ಗಿರಿಯ ಸುತ್ತುವನ ವಸರೊಳೊಬ್ಬಾ ನೀತ
ಗಿರಿ ಪಾಶಾ ಶಾಯಿ ಶ್ರೀ ವಿಜಯವಿಠಲ ನೀತ
ಗಿರಿಯಾ ಕಿತ್ತಿದವ ನಳಿದನಂದ ಧೀರ ನೀತ

ಆದಿ

ಶ್ಯಾಮವರ್ನ ಕೋಮಲಾಂಗ
ಸಾಮಗಾಯನ ವಿಲೋಲ
ಕಾಮ ಪರಿಪೂರ್ಣ ತಿರ್ಮ ಮೇಲಗಿರಿನಿಲಯ
ರಾಮರಂಗ ರಾಜೀವಾಕ್ಷಾ ವಾಮನಾ ಇಂದಿರಾ ಪ್ರಾಣ
ಪ್ರೇಮಾ ಯದುಕುಲ ಲಲಾಮ ಭಕ್ತವಾರ್ಧಿಸೋಮ
ಭೂಮಿ ವಾಯು ತೇಜಾ ರಾಪೂ ಯೋಮಂತ ಬಾಹ್ಯದಿ
ನೇಮಕನು ಸ್ವಾಮಕ ನೀಯಾಮಕನು ಗುಣಕರ್ಮಾ
ನಾಮಕನ ನೆನಿಯೆ ತ್ರಿಧಾಮಾದಲಿ ಸೇರಿಸುವ
ಭೀಮಾ ನಾಮಾ ದಾತಾನೀತಾ ವಿಜಯವಿಠಲ ಲೋಕ
ಸ್ವಾಮಿಯನ್ನು ಕಂಡೆ ಕಂಗಳ ಮನೋಹರವಾಯಿತು

ಜತೆ

ಮುಖಾರಿ

ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಡೆ

ಕಂಡೆ ತಿರುಪತಿ ವೆಂಕಟೇಶನ
ಕಾರಣಾತ್ಮಕ ಸಾರ್ವಭೌಮನ
ಕಾಮಿತಾರ್ಥಗಳೀವ ದೇವನ
ಕರುಣಾನಿಧಿ ಎಂದೆನಿಸಿ ಮೆರೆವನ

ಕೋಟಿ ಸೂರ್ಯಪ್ರಕಾಶವೆನಿಪ ಕಿ
ರೀಟವನು ಮಸ್ತಕದಿ ಕಂಡೆನು
ನೋಟಕಾಶ್ಚರ್ಯವಾದ ನಗೆ ಮುಖ
ನೊಸಲಿನಲಿ ತಿರುಮಣಿಯ ಕಂಡೆನು
ಸಾಟಿಯಿಲ್ಲದೆ ಚತುರ ಹಸ್ತದಿ
ಶಂಖ ಚಕ್ರ ಗದಾಬ್ಜ ಕಂಡೆನು
ಬೂಟಕದ ಮಾತಲ್ಲ ಕಾಣಿರೊ
ಭೂರಿ ದೈವರ ಗಂಡನಂಘ್ರಿಯ

ತಪ್ಪುಗಾಣಿಕೆ ಕಪ್ಪಗಳನು
ಸಪ್ತದ್ವೀಪಗಳಿಂದ ತರಿಸುವ
ಉಪ್ಪು ಓಗರಗಳನೆ ಮಾರಿಸಿ
ಉಚಿತದಿಂದಲಿ ಪಣವ ಗಳಿಸುವ
ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ
ಒಪ್ಪದಲಿ ಕ್ರಯ ಮಾಡಿಕೊಡಿಸುವ
ಸರ್ಪಶಯನನ ಸಾರ್ವಭೌಮನ
ಅಪ್ಪ ವೆಂಕಟರಮಣನಂಘ್ರಿಯ

ಉರದಿ ಸಿರಿದೇವಿಯಿರಲು ಕಂಡೆನು
ಉನ್ನತದಿ ಕೌಸ್ತುಭವ ಕಂಡೆನು

ಕಂಡು ಕೊಡುವುದ ನಾನು ಕಂಡೆನು
ಶರಧಿಶಯನನ ಸಾರ್ವಭೌಮನ
ವರದ ಪುರಂದರವಿಠಲನಂಘ್ರಿಯ

೧೮

ಕಲ್ಯಾಣಿ

ಕಂಡೆಕರುಣಾಕರನ ಕಣ್ಣಾರೆ ಮನದಣಿಯೆ
ಮಂಡೆಯಲಿ ಮಕುಟ ಝುಗಝುಗಿಸುತಿರೆ ಬಲುಕರ್ನಾ
ಕುಂಡಲದ ಬೆಳಗು ಕುಂದದೆ ಶೋಭಿಸೆ ಎರಡು
ಗಂಡಸ್ಥಳದಲ್ಲಿ ಮಿಂಚುವ ನಯನನಾಸ
ಚಂಡಪ್ರಕಾಶ ಅಳಿಗುರುಳು ನಸಲಲಿ ತಿಲುಕ
ತಂಡ ತಂಡದ ದಂತ ಅಧರ ಕೊರಳಲಿ ತುಲಸಿ
ದಂಡೆ ಕೌಸ್ತುಭಮಣಿ ಉರದ ಸಿರಿವತ್ಸವು
ದಂಡ ಬಲುಪದಕ ಮುತ್ತಿನಸರ ರೇಶಿಮೆ
ಗೊಂಡೆ ತೋಳಲಿ ವಪ್ಪೆ ಚತುರ್ಭುಜದ ಚನ್ನಿಗ
ದುಂಡಮಲ್ಲಿಗೆ ಉಳದ ಪೂವಾದಿಗಳು ಎಸಿಯೆ
ತೋಂಡರಿಗೆ ಬಿಡದೀವ ಅಭಯಕರ ಶಂಖಚಕ್ರ
ಗಂಡುಗಲಿ ಕಟಿಕರ ಘನವುಡುಗೆ ಶೃಂಗಾರ
ಡಂಡಣದ ಘಂಟೆ ಕಿಂಕಿಣಿಜಾನು ಜಂಘೆ ವೀರ
ಪೆಂಡೆ ಪಡದಂದಿಗೆ ಭಂದವಾದದು ಕಂಡೆ
ತೊಂಡಿಗೆ ಗತಿಯನಿತ್ತ ವೆಂಕಟ ವಿಜಯವಿಠಲ
ಕುಂಡಲಗಿರಿವಾಸ ತಿರುವೆಂಗಳೇಶ

ಮಟ್ಟ

ಗರುಡ ವಿಷ್ವಕ್ಸೇನ ವರ ಸುದರುಶನ
ಪರಮಪುರುಷನ ಎದುರಿಲಿ ಚತುರಬೀದಿ
ಮೆರೆವುತಲಿ ಸುತ್ತ ಬರುವದು ನಾನಾಕ

ತ್ರಿವಿಡಿ

ಇಂದು ಧ್ವಜಾರೋಹಣವೆಂದು ತಿಳಿದು ವನಜ
ನಂದನ ಇಂದುಶೇಖರ ನಿರ್ಜರ
ಸಂದೋಹ ಸನಕಸನಂದಮುನಿ ನಾ
ರಂದ ತುಂಬರ ಗಂಧರ್ವಸೊಬಗತಿ
ಛಂದದಿಂದಲೊಪ್ಪುವ ಅಂದವಾದ ನಾರೇರು
ಬಂದಿಮಾಗದರು ನಿಸ್ಸಂದೇಹವಿಲ್ಲದೆ
ನಿಂದೆಡಬಲದಲ್ಲಿ ವಂದೆ ದೈವಾವೆಂದು
ವಂದಿಸಿ ತಮ್ಮ ತಮ್ಮಗಂದವಾಗಿ ಪೊಗಳೆ
ಚಂದಿರವದನ ತಿರ್ಮಲ ವಿಜಯವಿಠಲ
ತುಂದಿಯಿಂದಲಿ ನೆನಿಯೆ ಅಂದ ವರವನೀವ

ಅಟ್ಟ

ಎಲ್ಲಲ್ಲಿ ನೋಡಿದರಿಲ್ಲ ಇದರ ಸರಿ
ಎಲ್ಲ ನಿಧಿಗಳಿಗೆ ಬಲ್ಲಿದ ನಿಧಿಯನ್ನಿ
ಬಲ್ಲವನಾಗಿದ್ದು ನಿಲ್ಲದೊಂದೆ ಸಾರೆ
ಸಲ್ಲಲಿತ ಮನದಲ್ಲಿ ಯಾತ್ರೆಮಾಡೆ
ಸಲ್ಲಾನು ನರಕಕ್ಕೆ ಎಲ್ಲಾ ಜನ್ಮದ ಪಾಪ
ತಲ್ಲಣಿಸಿ ಎದ್ದುನಿಲ್ಲದೆ ಓಡೋವು
ಯಳ್ಳನಿ ತರ್ಪಿತ ಸೊಲ್ಲಿನಿಂದಲಿ ಎನೆ
ಸಲ್ಲಿಸಿ ಈ ಮಾತ ವಿಜಯವಿಠಲ ಸಿರಿ
ವಲ್ಲಭ ತಿರುವೆಂಗಳೆಲ್ಲೆಲ್ಲಿ ನಲಿವಾ

ಆದಿ

ಶ್ರೀನಿವಾಸನ ಕ್ಷೇತ್ರ ಆನಿರ್ಜರರು ಎಣಿಸಿ
ಕಾಣಾರು ಎಣಿಕೆ ಗಣಣೆ
ಕೋಣೆಯೊಳಗುಳ್ಳ ನಿಧಿಗೆ
ಮಾಣಿಕವಾಗಿದ್ದು ಮೆರದು
ಧಾನಮಾಡಿದವನ ಮಾತಿಗೆ

ಜತೆ

ದಿಲೀಪಾ ವರದ ಪನ್ನಂಗ ಮಹಿಧರ ಧೀಶ
ಲೋಲಾ ವಿಜಯವಿಠಲ ತಿಮ್ಮರಾಯನ ಕಂಡೆ

೧೯

ಸಾವೇರಿ

ಕಂಡೆ ನಾ ಬ್ರಹ್ಮಾಂಡದೊಡೆಯ ಶ್ರೀ ವೆಂಕಟೇಶನ

ಕಂಡೆ ನಾ ಭಕುತರ ಹಿಂಡುಗಳು ನೆರೆ
ಕೊಂಡಾಡುತಲಿದೆ ಪದಪುಂಡರೀಕವನಾ

ತುಂಗಮಹಿಮ ಸತ್ಸಂಗವಿತ್ತು ಮನದಂತರವರಿ-
ತಾಂಗೀರಸದೀ ಮಂಗಳ ಪೌರ್ಣಿಮೆ ಭಾರ್ಗವಾಸರದಿ
ಭಾರ್ಗವಿಪತಿ ನಿನ್ನನುಗ್ರಹದಿ ನಗದೊಡೆಯ ಭಕ್ತ-
ರಘುಹರಿಸುತ ಪನ್ನಗಗಿರಿಯೊಡೆಯ ನಿನ್ನಯ ಗುಡಿಯನ್ನು
ಬಗೆಬಗೆ ಸುತ್ತಿಪರ ಹಿಂಡನ್ನು ನಾ ಕಂಡೆನೋ
ಜಾಗುಮಾಡದೆ ಬಾಯಿ ಬೀಗವ ಕೈಕೊಂಡು
ಸಾಗಿ ಕಾಸಾರದಿ ಸ್ನಾನ ಮಾಡಿಕೊಂಡು
ಬಾಗಿ ವರಹಾದೇವರ ವಂದಿಸಿ
ಬೇಗದಿ ಹರಕೆ ಕೈಕೊಂಡಿಹ ದೇವನ

ಮುಕ್ತರೊಡೆಯ ಪುರುಷೋತ್ತಮ ನಿನ್ನಯ
ಭಕ್ತರ ವಿಪತ್ತುಗಳೆಲ್ಲ ಹರಿಸಿ ಶಕ್ತ್ಯಾನುಸಾರ ತ್ವ-
ದ್ವ್ಯಕ್ತರೆಸಗುವ ಅತ್ಯಲ್ಪಭಕ್ತಿಯ ಸ್ವೀಕರಿಸಿ
ಭಕ್ತಿಯಿಂದ ಪ್ರಾಕಾರದಿ ಸುತ್ತಲು ಹೊತ್ತಗಂಡದೀಪ ಸಾರುತಲಿ
ನಿತ್ಯನೂತನ ನಿನ್ನ ಸ್ತುತಿಸುತಲೀ ಮತ್ತೆ ಉರುಳುತಲೀ
ಉತ್ತಮಗತಿಪ್ರದ ವ್ಯಕ್ತನಹುದೊ ತ್ವ-
ದ್ವ್ಯಕ್ತರ ಮನೋರಥ ಪೂರ್ತಿಮಾಡುವ

ಸನ್ಮಂಗಳ ರೂಪವ ನಿಲ್ಲಿಸದೆ ಸುಮ್ಮನೆ ಕುಳಿತು
ಇಮ್ಮನಸಾಗಿರೆ ಘಮ್ಮನೆ ಎನ್ನನು ಒಳಕ್ವೈದೆ
ಕಣ್ಮನದೆದುರಲಿ ನೀನಿಂದೆ ನಿಶ್ಚಯತಂದ ಸನ್ಮುದದಿಂದ
ಪಾಮರನೆಂದೆನ್ನ ಪ್ರೇಮದಿ ಕರುಣಿಸಿ
ಸನ್ಮಹಿಮೆಯ ತೋರ್ದೆ ಜಗದೀಶ
ಕಾಮಿತಜನರ ಕಲ್ಪದ್ರುಮ ನೀನೆಲೊ
ಈ ಮೇಲುಗಿರೀಶ ಶ್ರೀವೆಂಕಟೇಶಾ ನಿನ್ನ

## ೨೦

ಕಂಡು ಧನ್ಯನಾದೆ ನಂದ ತನಯನ ಕಣ್ಣಾರ
ಕಂಡು ಧನ್ಯನಾದೆ ನಂದ ತನಯನ
ಕಂಡು ಧನ್ಯನಾದೆ ದಣಿಯವೆನ್ನವೆರಡು ಕಂಗಳೀಗ
ತಿರುಗಿ ಪೋಗಲಾರೆ ತಿಮ್ಮಲಾಪುರೀಶ ದೊರೆಯ ಬಿಟ್ಟು

ಸಾಲುದೀವಿಗೆ ಸಣ್ಣನಾಮ ಸರದ ಮಧ್ಯೆ ವೈಜಯಂತಿ
ಸೂರ್ಯನಂತೆ ಹೊಳೆವ ಮುದ್ದು ಮುಖವು ಮಹಾದ್ವಾರದಲ್ಲಿ

ಶಂಖಚಕ್ರ ಶ್ಯಾಮವರ್ಣ ಅಂಕಿತವುಳ್ಳ ನಾಮಗಳಿಂದ
ಪಂಕಜಾಕ್ಷ ಪರಮಪುರುಷ ವೆಂಕಟನೆಂಬೊ ನಾಮಾಂಕಿತದವನ

ಆ ಮಹಾ ವೈಕುಂಠದಲ್ಲಾವಾಸವಾದ ನಮ್ಮ ಕುಲ–
ಸ್ವಾಮಿ ಎನಿಸಿಕೊಂಡ ಭೀಮೇಶ ಕೃಷ್ಣನ ದಯದಿಂದೀಗ

## ೨೧

ದ್ವಿಜಾನಂತಿ

ಕನಸುಕಂಡೆನೆ ಮನದಲ್ಲಿ ಕಳವಳಗೊಂಡೆನೆ
ಏನು ಹೇಳಲಿ ತಂಗಿ ತಿಮ್ಮಯ್ಯನ ಪಾದವನು ಕಂಡೆ

ಕಸ್ತೂರಿ ತಿಲಕನಿಟ್ಟು ಗೆಜ್ಜೆ ಘಲುಗೆನುತ
ಸ್ವಾಮಿ ತಾ ಬಂದು ನಿಂತಿದ್ದನಲ್ಲೆ

ಮುತ್ತಿನ ಪಲ್ಲಕ್ಕಿ ಯತಿಗಳು
ಹೊತ್ತು ನಿಂತಿದ್ದರಲ್ಲೆ ಛತ್ರ ಚಾಮರದಿಂದ
ರಂಗಯ್ಯನ ಉತ್ಸವ ಮೂರುತಿಯು

ತಾಮರ ಕಮಲದಲಿ ಕೃಷ್ಣಯ್ಯ ತಾ
ಬಂದು ನಿಂತಿದ್ದನಲ್ಲೆ ವಾಯು ಬೊಮ್ಮಾದಿಗಳು
ರಂಗಯ್ಯನ ಸೇವೆಯ ಮಾಡುವರೆ

ನವರತ್ನ ಕೆತ್ತಿಸಿದ ಸ್ವಾಮಿ ಎನ್ನ
ಹೃದಯ ಮಂಟಪದಲ್ಲಿ ಸರ್ವಾಭರಣದಿಂದ
ಪುರಂದರವಿಠಲನ ಕೂಡಿದೇನೆ

## ೨೨

ಭೈರವಿ

ಕಮಲಾ ಕಮಲಾಸನದಿಂದೊಪ್ಪುವ ಪೊಕ್ಕಳಮಲವಾಗಿ
ಮೆರೆವ ಬಲುಕಾಂತಿಯಾದ ಉದರ
ಸಮ ವಿಷಮವಿಲ್ಲದ ನೋಳ್ಪವರ ಕಂಗಳಿಗೆ
ಸಮತಳವಾಗಿ ವಿರಾಜಿಸುವ ಉದರ
ಶಮದಮವಾನಂತ ಗುಣಪರಿಪೂರ್ಣವಾದ
ಪ್ರಮೆಗಳು ತುಂಬಿದ ಕಲುಷಹರ ಉದರ
ದಮುನಾಮ ನಮ್ಮ ವಿಜಯ ವಿಠಲೇಶನ
ನಮಿಸದವರ ಮನಕೆ ಬೆಡುಗುತೋರುವ ಉದರ

ಮಟ್ಟ

ಭುವನತ್ರಯದೊಳಗೆ ಧವಳವರ್ಣ ಉದರ

ತ್ರಿವಿಡಿ

ಗುಣತ್ರಯಗಳ ಬಿಡದೆ ಪೊಂದಲಿಟ್ಟಾ ಉದರ
ಗಣನೆಯಿಲ್ಲದ ಜೀವರಾಶಿಗಳಿದ್ದುದರ
ಅನುವರಿತು ವೇದಗಳು ಸ್ತುತಿಸಿಕಾಣದ ಉದರ
ಮುನಿಗಳ ಮತಿಗೀಗ ನಿಲಕಾದಿಪ್ಪ ಉದರ
ಜನನಿ ಗೋಪಿಗೆ ಒಳಗೆ ಲೋಕಾತೋರಿದ ಉದರ
ಅನಿಮಿಷರು ನೋಡಿ ಬೆರಗುಬೀಳುವ ಉದರ
ಗುಣಸಾಂದ್ರ ಸಪ್ತೈಧಾ ವಿಜಯವಿಠಲರೇಯ
ಮಣಿ ಕಾಂಚನದಂತೆ ಮಿನಗುವ ಚಲುವ ಉದರ

ಅಟ್ಟ

ಎಂದಿಗೆಂದಿಗೆ ಕ್ಷುಧಾರಹಿತವಾದ ಉದರ
ಗಂಧಕುಸುಮದಿಂದ ಪೂಜೆಗೊಂಬ ಉದರ
ಒಂದೊಂದು ರೀತಿಯಲಿ ಬೆಳಕಾಗುವ ಉದರ
ಮಂದಮತಿಗೆ ಜ್ಞಾನವನೀವ ಉದರ
ಅಂದು ಪರ್ವತ ಪೊತ್ತು ಮೃದುವಾದ ಉದರ
ತಂದರ್ಪಿಸಿದ ಮಿತಾತನದ ಉದರ
ಸುಂದರ ಶ್ರೀರಂಗ ವಿಜಯವಿಠ್ಠಲ ನಿನ್ನ
ಚಂದಾದ ತ್ರಿವಳಿ ಎಸೆವಂಥ ಉದರ

ಆದಿ

ಜೊಲ್ಲು ಜೊಲ್ಲು ಸುರಿವಧಾರಿಯಲ್ಲಿ ಶೋಭಿಸುವ ಉದರ
ಸಲ್ಲಲಿತವಾದ ಭಕ್ತರೆಲ್ಲರಭೀಷ್ಟಯ ಉದರ
ಕಲ್ಲಿಬೋನಾ ಸವಿದು ಸವಿದು ಡೊಳ್ಳುಬೆಳಿಸಿಕೊಂಡ ಉದರ
ಬಳಿದ ನಾಮಾ ವಿಜಯವಿಠಲ ಕರ್ತೃವಿನ ಉದರ

ಜತೆ

ಕಲ್ಯಾಣಿ

ಕಾಯದಿಂದಲಿ ಭಕ್ತ ಮಾಡೀದಪರಾಧ
ತಾಯಿಯಂದದಿ ತಾನೆ ಕಾರುಣ್ಯದಿಂ
ಘಾಯವಾಗದಂತೆ ದಂಡಿಸಿ ಪಾಲಿಸುವ
ಶ್ರೀಯರಸನ ಗುಣಕೆ ಏನೆಂಬೆನೋ
ಸ್ತ್ರೀ ಯೋಗಾ ಮೊದಲಾದ ಪಾಪಂಗಳು ಮಾಡಿರೆ
ಕಾಯಿದು ಕೊಂಬವಸ್ತೈಯ ವಾಸನಮಯದಿಂ
ಆಯಿತೆಂದೆನಿಸುವ ಸ್ವಲ್ಪಾನುಭವದಿಂದ
ನೋಯಾದಂತೆ ಪಾಪಾ ತೀರಿಸುವನು
ಈಯವನಿಯೊಳಗೆ ಎಣಿಸಿದರು ಇಂಥ ಉ
ಪಾಯ ಬಲ್ಲಂಥ ದೈವವಂದೂ ಇಲ್ಲಾ
ಬಾಯಲ್ಲಿ ಆಡಿದರು ಕೋಪದಿಂದಲಿ ಅವನ
ಸಾಯಾಬಡುವರಲ್ಲೊ ಮುಂದೋರದೆ
ಕಾಯಾಜ ಪಿತನ ಮಹಿಮೆ ಕೇಳಿರೊ ತನ್ನವರು
ಕಾಯಾದಲ್ಲಿ ಪಾಪಾಮಾಡೆ ಮನದಲ್ಲಿ ಉಣಿಪಾ
ಛಾಯಾದಂತೆ ಪುಣ್ಯ ಮನದಿಂದ ಮಾಡಿದರೆ
ಕಾಯದಲಿ ಉಣಿಸುವ ಖ್ಯಾತಿ ಇತ್ತು
ಮಾಯಾಕಾರನ ಮಾಯ ತಿಳಿದವನಾರು ದೈ
ತೇಯ ಜನರಿಗೆ ಇದರ ವಿಪರೀತವೊ
ವಾಯುವಂದಿತ ವಿಜಯವಿಠಲ ವೆಂಕಟಗಿರಿ
ರಾಯ ತನ್ನ ಶರಣರಿಗೆ ಭೀತಿಬರಗೊಡನು

ಅಟ್ಟ

ಧರಣಿಯೊಳಗೆ ತನ್ನ ಶರಣರ ಸೌಭಾಗ್ಯ
ನಿರುತರ ಶ್ರುತಿತತಿ ಪರಿಪರಿಯಿಂದಲಿ
ವರದೂರದು ಪೇಳಿ ಬೆರಗಾಗುತಲಿವೆ

ಸ್ಥಿರವಾಗಿ ನಿಂದು ಕರದು ವರವಕೊಡುವ

## ತ್ರಿವಿಡಿ

ಆವಾವ ದೈವಗಳ ನಂಬಿದರೇನಯ್ಯಾ
ಭಾವದಲಿ ನೋಡಿದರು ಸುಖವೇ ಇಲ್ಲ
ನೋವಾಗುವದು ಕೇಳಿ ಬಾಯಿಲಾಡಿದದಕ್ಕೆ
ಕೇವಲ ಬಾಧಿಯ ಬಿಡಿಸುವರು
ದೇವದೇವೇಶನ ಕರುಣತ್ವ ಇಂತಲ್ಲ
ನೋವಾಗೂಡದಂತೆ ಉಣಿಪ ಪಾಪಾ
ಆವಾವಗಾದರು ಇಂಥಾ ಶಕುತಿ ಉಂಟೆ
ತ್ರಿವಿಧಗುಣದಿಂದ ಪ್ರತಿಬದ್ಧರೂ
ಭೂವಲ್ಲಭ ಚೋರರ ದಂಡಿಸಿದಂತೆ ದೈ
ತ್ಯಾವಳಿಯ ಶಿಕ್ಷಿಸುವ ನಿರ್ದೋಷನೂ
ದೇವ ನಾರಾಯಣಗಿರಿ ವಿಜಯವಿಠಲ
ಶ್ರೀ ವೆಂಕಟನಾಥ ನಮ್ಮನು ಕಾವಾ

## ಅಟ್ಟ

ಭಾರವೊಹಿಸುವ ದೀನವತ್ಸಲ ಅಚ್ಯುತ
ಸಾರಿಸಾರಿಗೆ ತನ್ನ ಸಾರಿದವರು ಸಂ
ಸಾರದೊಳಗ ಇರೆ ಕರುಣದಿಂದಲಿ ಸಂ
ಸಾರಿಗ ತಾನಾಗಿ ಇವರನ್ನ ತಗದು ಉ
ದ್ಧಾರಮಾಡುವನಯ್ಯಾ ಸುಲಭ ಮೂರುತಿ ಇದು
ವಾರಿಯೊಳಗೆ ಬಿದ್ದ ಮನುಜಗಾಗಿ ತಾನು
ವಾರಿಯಾ ತುಡಿಕಿ ಪಿಡಿದೆತ್ತಿ ತಂದವನ
ತೀರದಲಿಟ್ಟು ಪಾಲಿಸಿದಂತೆ ಕಾಣಿರೊ
ಮಾರಜನಕ ನಮ್ಮನು ಭವದಿಂದಲಿ

ವಿಕಸಿತಜಕ್ಷು ನಾಲೆಂಪವದನನ ಕಂಡೆ
ಪ್ರಕಟತಕೌಸ್ತುಭ ಯಳೆದುಳಸಿ ಮೌ
ಕ್ತಿಕಹಾರನ ಕಂಡೆ ಸಿರಿದೇವಿಯ ಕಂಡೆ
ಸಂಕರುಷಣನ ಕಂಡೆ ಚತುರ್ಭುಜನನ ಕಂಡೆ
ಪೊಕ್ಕಳಮಣಿಯ ಕಂಡೆ ವರವಸನನ ಕಂಡೆ
ಸಕಲ ಭೂಷಣ ಕಂಡೆ ಭಕುತಜನಕೆ ವೇಗ
ಮುಕುತಿವೀವನ ಕಂಡೆ ಅಖಿಳ ಜೀವೇಶನ ಅನಂತವೇಶನ
ಶಿಖಿಸಖ ಪರಿಯಂತ ಸಖಿಶಿಖಿವನು ಕಂಡೆ
ಮುಖಜವಂದಿತ ಪಾದ ವಿಜಯವಿಠಲ ಕ
ನಕಾಚಲ ತಿರುವೆಂಗಳೇಶ ತಿಮ್ಮನ ಕಂಡೆ

## ರೂಪಕ

ತಿರುಮಲ ತಿರುಪತಿವಾಸ ನಿರುಮಲ ನಿಸ್ಸಂಗ ಭೂಷ
ಶರಣಜನರ ಪರಿತೋಷ ತರಣಿಪ್ರಕೋಟ ಸಂಕಾಶ
ಜರಮರಣ ನಿರ್ದೋಷ ಪರಿಪೂರ್ಣಗುಣ ವಿಲಾಸ
ಪರಮಮಾನಸರಹಂಸ ಹರಿ ವಿಜಯವಿಠಲೇಶ
ಸಿರಿದೇವಿಯ ಪ್ರಾಣದರಸ ಉರಗಿರಿಯವೆಂಕಟೇಶ
ಹರಿಯೆನಲು ದೋಷನಾಶ

## ಧ್ರುವ

ಆರಿಗಂಜನೊ ನಾನು ಆರಿಗಳಿಕೆನೊ ನಾನು
ಆರನಾದರು ಲೆಕ್ಕಿಸದಿಪ್ಪೆನೊ ನಾನು
ಮಾರಿ ಮೃತ್ಯುಗಳು ಕೇಲಸಾರದಲೆ ಬಂದರೆ
ದೂರದಲ್ಲಿ ನಿಲ್ಲಿಸಿ ಮಾತಾನಾಡಿಸುವೆನೊ
ಶೇರಾಗೊಡೆ ದುಷ್ಟರನ ನೂರಾರೋಜನದೊಳಗೆ
ಕಾರುಣ್ಯ ನಿಧಿಯನ್ನು ಕಂಡು ಬಳಿಕಾದಲ್ಲಿ
ಘೋರಾದೂತರು ಎನ್ನಾಕಡಿಗೆ ಬಾರದಂತೆ

ತ್ರಿವಿಡಿ

ನಾರಾಯಣನಂತ ನಿರ್ದೋಷ ಗುಣಪೂರ್ಣ
ಸಾರನಿತ್ಯ ಸ್ವಾತಂತ್ರ್ಯಸುಸ್ವರಮಣ ವೇದ
ಪಾರಾಯಣ ನಾಶರಹಿತ ಶಾಮವರ್ಣ
ಧಾರುಣಿಯೊಳಗೀತಗಧಿಕ ಸಮರಿಲ್ಲ
ತೋರುವನಲ್ಲ ಕಂಡವರ ಮನಕೆ ಭಕ್ತ
ಧಾರಾನು ಭವರೋಗ ವೈದ್ಯ ಚೈದ್ಯ ಮಥನ
ನಾರದವಂದ್ಯ ಶ್ರೀ ವಿಜಯವಿಠಲ ಉ
ದಾರಿ ಕಾಣೆಲವೊ ಸಮಸ್ತ ದೇವರೊಳಗೆ

ಅಟ್ಟ

ಶಂಕಸುರನ ಕೊಂದ ನಿಶ್ಶಂಕನೀತ
ಪಂಕಜಸುತನ ಪಡದ ದೈವನೀತ
ಶಂಕರನ್ನ ಪ್ರಾಣವನು ಕಾಯಿದನೀತ
ವೆಂಕಟಗಿರಿಯಲ್ಲಿ ಮೆರೆವಾತನೀತ
ಪಂಕಜೋದರನೀತ ಪಂಕಜಾಪತಿ ಈತ
ಲಂಕಪುರ ವಿಭೀಷಣಗಿತ್ತನೀತ
ಕಿಂಕರಿಗೊಲಿದಂಥ ಕೈಟಭಾರಿ ಈತ
ಓಂಕಾರನಾಮ ಉಳ್ಳಾತನೆ ಈತ
ಶಂಕಚಕ್ರಾವನ್ನು ಕೊಟ್ಟಾತನೀತ
ಬಿಂಕಾದ ಬಿರದನ್ನು ಕಟ್ಟಿದನೀತ
ಶಂಖಪಾಣಿ ನಮ್ಮ ವಿಜಯವಿಠಲರೇಯಾ
ತಂಕವಿಲ್ಲದ ಪೌರುಷದಾತನೀತ

ಆದಿ

ನಂಬೀರ್‍ರೈಯ್ಯ ನೀವು ಜಗದಂಬಿಕೆರಮಣನಾದ
ಅಂಬುಧಿಶಯನ ಪಾದಾಂಬುಜಾಗಳಾನುದಿನಾ
ಬೆಂಬಿಡಾದೆ ಭಜಿಸಲು ಉಂಬುವಾದಕ್ಕುಡಲುಂಟು

[illegible]

ಕಾಂಬೆನೆಂಬಾ ದಾಸರಿಗೆ ಬೆಂಬಲವಾಗಿ ನಿಲ್ಲುವ

ಜತೆ

ಆನಂದಮಯ ಸಕಲಾಮಾನಂದ ಮಹಿಮಾನೆ
ಆನಂದಗಿರಿ ವಿಜಯವಿಠಲ ತಿಮ್ಮನ ಕಂಡೆ

೨೫

ಕೇವಲ ಕೈವಲ್ಯ ಇಲ್ಲೇ ದೊರೆವುದು
ಮಾಧವನಿಹನೋಡೋ ಗಿರಿನಾಥ

ಈ ವಿಷಯದಿ ನೀ ಲಂಪಟನಾಗದೆ
ದೇವದೇವನ ಭಜಿಸಿ ಸುಖಿಯಾಗೊ ಮನುಜ

ತನ್ನ ಕರದಿ ತನ್ನ ಪಾದವ ತೋರುತ
ಮುನ್ನ ಮನುಜ ಮುಕ್ತನಾಗೆನುತ
ಹೊನ್ನುಹೊಕ್ಕುಳಿಯೊಳು ರನ್ನಿಟ್ಟುನಲಿಯುವ
ಘನಮಹಿಮ ಗಿರಿವಾಸ ವೆಂಕಟನಿಂದಾ

ಎಡಬಲದಲಿ ಶ್ರೀದೇವಿ ಭೂದೇವಿಯರ್
ಬಿಡದೆ ಚಾಮರವನ್ನು ಪಿಡಿದಿರಲು ಮಡದಿಯರ್ಗಡಣದಿ
ನಡುವೆ ಶೋಭಿಸುತೆ
ಕಡಲಸ್ಥಾನವ ಬಿಟ್ಟು ಗಿರಿಗೆ ಬಂದುದರಿಂದಾ

ಪ್ರೇಮದಿ ಭಜಿಸುವ ಭಕ್ತಜನರಿಗೆಲ್ಲಾ
ಕಾಮಿತಾರ್ಥವನೀವ ಬಹುದಾತ
ಸ್ವಾಮಿ ಪುಷ್ಕರಿಣಿಯ ತೀರದಿ ನೆಲಸಿಹ
ಸ್ವಾಮಿ ಶ್ರೀ ಪುರಂದರವಿಠಲರಾಯನಿಂದಾ ಕೇವಲ ಕೈವಲ್ಯ

೨೬

ಸಡಗರ ಸಂಪದ ಎಡೆಬಿಡದೆ

ಜಡಮತಿಯನು ಕೆಡಿಸಿ ಜಡದೇಹಮೋಹ ಬಿಡಿಸಿ
ಜಡಭವತೊಡರನು ಕಡೆಹಾಯ್ಸಿ
ಅಡಿಗಡಿಗೆ ನಿನ್ನಡಿದೃಢಭಕುತಿ

ಸಾಗರಸಂಸಾರಭೋಗದ ಬಲುಘೋರ
ನೀಗಿಸಿ ನಿಜಜ್ಞಾನ ಪಾಲಿಸಿ
ಬೇಗನೆ ನೀಡು ತವದರುಶನವ

ಮನಸಿನ ಹರಿದಾಟ ಘನಘನ ದುಶ್ಚಟ
ವನು ಪರಿಹರಿಸಿ ದಯಮಾಡು
ಮನಶ್ಶಾಂತಿ ಸದುಗುಣವ

ತನುತ್ರಯದಲಿ ನಿನ್ನ ನೆನಹನು ನಿಲಿಸೆನ್ನ
ಬಿನುಗು ತ್ರಿದೋಷ ದೂರಮಾಡಿ
ಜನನ ಮರಣಂಗಳ ಗೆಲಿಸಭವ

ಭೂಮಿಯೊಳಧಿಕೆನಿಪ ಸ್ವಾಮಿ ಶ್ರೀರಾಮಭೂಪ
ನೇಮದಿ ಬೇಡುವೆ ವರ ನೀಡು
ಆ ಮಹಕೈವಲ್ಯ ಪದವಿಯ

## ೨೭

### ಸಾರಂಗ

ಕೋಮಲತಿ ಶುಭಗಾತ್ರನ ಮಹತಾಮರಸದಳ ನೇತ್ರನ
ಸ್ವಾಮಿ ಶ್ರೀನಿವಾಸನ ಕಂಡೆ ಹೇಮಗಿರಿವರಧೀಶನಾ

ಕನ್ಯೆ ಲಕುಮಿಯನೆತ್ತಿದ ಶುಭ ಚಿನ್ಹಧಕ್ಕಿಯ ಹತ್ತಿದ
ರನ್ನದುಡಿಗೆಗಳಿಟ್ಟನ ಸುವರ್ಣದಂಬರನುಟ್ಟನ
ಕರ್ಣಕುಂಡಲ ಬೆಳಗಿನ ನುಣ್ಗೆನ್ನೆಲ್ಯಲುಗುವ ಕುರುಳಿನ

ಹಿಂದಡ ಬಲದಿ ಛತ್ರವ ಪಿಡಿದಿಂದಿರೆಯರೊಳೊಪ್ಪುವ

ಘೋರ ಮುತ್ತಿನ ಹಾರದ ಕೇಯೂರ ಕೌಸ್ತುಭ ವಕ್ಷದ
ಚಾರುಸ್ಮಿತ ಮುಖರೋಚಿಯ ದಯವಾರಿಧಿಯ ಮಹೋದಾರಿಯ
ಸಾರಿದರ ಸುರತರುವಿನ ಸುರವೈರಿ ಕರಿ ಪಂಚಾನನ
ಭೂರಿ ಪ್ರಸನ್ವೆಂಕಟೇಶನ ಹೃದಯಾರವಿಂದ ನಿವಾಸನ

## ೨೮

ಶಂಕರಾಭರಣ

ಕೋಲು ಕೋಲೆನ್ನ ಕೋಲು ಮುತ್ತಿನ ಕೋಲು ಕೋಲೆನ್ನ ಕೋಲು
ಕೋಲನಾಡುವ ಬನ್ನಿ ಬಾಲವೇಂಕಟಪತಿ ಲೀಲೆ ಕೊಂಡಾಡುತಲೆ

ಪರಮ ದಯಾಳು ಹರಿ ಭೃಗುಮುನಿ ಭರದಿಂದೊದೆವುತಿರೆ
ತಿರುಗಿ ಕಾಲ್ಪಿಡಕೊಂಡು ಪರಿ ಪರಿ ಸ್ತುತಿಸಿದ

ಪರಮ ಚಂಚಲ ಲಕ್ಷ್ಮೀ ತಾಶ್ರೀ ಹರಿ ನಡತೆಯ ನೋಡಿ
ಧರಿಸದೆ ಕೊಲ್ಲಾಪುರಕೆ ನಡೆದಳು

ಸಿರಿಯಿಲ್ಲದೆ ನಾನು ಒಬ್ಬನೆ ಇರಲಾರೆನು ಎಂದು
ಹರಿ ವೈಕುಂಠದಿಂ ಧರೆಗಿಳಿದನು

ಉತ್ತಮ ವೈಕುಂಠ ಇರಲು ಮತ್ತುರ ಗಾದ್ರಿಯಲಿ
ಹುತ್ತ ಮನೆಯ ಮಾಡಿ ಗುಪ್ತದೊಳಿರುತಿಹ

ನಿತ್ಯ ನಿರ್ವಿಕಾರ ಶ್ರೀಹರಿ ಭಕ್ತರ ಅಭಿಮಾನಿ
ನೆತ್ತಿಯ ಒಡಕೊಂಡು ಭಕ್ತನ ಸಲಹಿದ

ಭವರೋಗದ ವೈದ್ಯ ತಾನೆನಿಸುವನು ಗುರುವ ಕರೆದು
ಅವನಿಂದಲ್ಲೆ ಘಾಯವ ಕಳೆದನು ಭೂಮಿರಮಣವರಾಹ

ದೇವನ ಭೂಮಿಯ ತಾ ಬೇಡಿ

ಮನಸಿಟ್ಟನು ಆ ವನಿತೆಯ ಮೇಲೆ

ಆ ವನಿತೆಯು ಕನ್ಯಾ ತಾ ಪದ್ಮಾವತಿ ಯೆನಿಸುವಳು
ಹೂವಿಗೆ ಬಂದಳಾ ವನದಲೆ ೧೦

ವಾರಿಗೆ ಗೆಳತಿಯರಾ ಕೂಡಿ ವಿಹಾರ ಮಾಡುತಿಹಳು
ಸಾರೇಕ ನಡೆದನು ಶ್ರೀರಮಣನು ತಾ ೧೧

ನಾಡೊಳಗಿನ ರೀತಿ ಎಲ್ಲರು ಆಡುವಂಥ ಮಾತು
ಆಡಿದ ಕಲ್ಲೀಡಾಡಿದಳಾಕೆ ೧೨

ಪೆಟ್ಟುತಾಗಿ ಕುದುರೆ ಪ್ರಾಣವ ಬಿಟ್ಟಿತು ಆಗಲ್ಲೆ
ಬಿಟ್ಟು ಕುದುರೆಯ ಬೆಟ್ಟವನೇರಿದ ೧೩

ಆ ಮಾನಿನಿ ಅವಗೆ ಮೋಹಿಸಿ ತಾ ಮಾತಾಡದಲೆ
ಕಾಮಜ್ವರದಿಂ ತಾ ಮಲಗಿಹಳು ೧೪

ಪ್ರಾಂತಕ ನಂತಾದ್ರಿ ಯಲ್ಲಿಹ ಶಾಂತ ಮೂರುತಿ ಹೊರತು
ಅಂತರಂಗ ಜ್ವರ ಶಾಂತವಾಗಲು ಕೋಲು ಕೋಲೆನ್ನ ಕೋಲು ೧೫

## ೨೯

ಶಂಕರಾಭರಣ ತ್ರಿಪು

ಗಿರಿಯ ತಿಮ್ಮಪ್ಪ ವಾಹನಗಳೇರಿ ನಿತ್ಯ
ಮೆರೆದು ಚತುರ ಬೀದಿ ತಿರುಗಿ ಬಪ್ಪದು ನೋಡೆ

ಸರಸಿಜ ಭವಾಗ್ರಜರುಳಿದವರು
ವರಸಕಲ ಮನೋಭೀಷ್ಟ ಕೈ ಕೊಳುತಾ
ನೆರೆದು ಸುತ್ತಲು ತಮ್ಮ ಭಕುತಿಯಲಿ ಸೂಸುತ್ತ
ಹರುಷ ವಾರಿಧಿಯೊಳು ಮುಳಗಿದಟ್ಟಡಿಯಿಂದಾ

ಎತ್ತಿದ ಸತ್ತಿಗೆಯಿಂದ ಪೀಯೂಷ

ತಂಡ ತಂಡಲಿ ಮಹಿಮೆಯನ್ನು
ಕೊಂಡಾಡುತ ಮನ ಉಬ್ಬಿ ಮಹೋತ್ಸವದಲ್ಲಿ
ತೋಂಡರು ಹರಿದಾಡಿ ಪಾಡಿ ಪಾಡುತಲಿರೆ

ಪವನ ಗರುಡ ಶೇಷ ಸಿಂಹ ಮಂಟಪ ಮತ್ತೆ
ರವಿ ಶಶಿ ತುರಗ ಅಂದಣ ಮಿಕ್ಕಾದ
ನವರಾತ್ರಿಯೊಳಗೆಲ್ಲ ವಾಹನ ನಾದ ಅಂ
ದವನಾರು ಬಣ್ಣಿಪರು ಸಕಲ ಭೂಷಿತವಾಗೆ

ಚಿನುಮಯ ರೂಪ ವಿಚಿತ್ರ ಮಹಿಮ ದೇವ
ನೆನೆದವರ ಹಂಗಿಗೆ ಸಿಲಕುವಾ
ಘನಗಿರಿ ತಿರ್ಮಲ ವಿಜಯ ವಿಠಲರೇಯಾ
ದನುಜ ದಲ್ಲಣನೆಂಬೊ ಬಿರುದು ಪೊಗಳಿಸುತ

## ೩೦

ಸಾವೇರಿ

ಗಿರಿಯ ಶಿಖರವ ಕಂಡೆ ಅರುಣ ಸುವರ್ಣಮಯ
ಮಿರುಗುತಿದೆ ಚತುರ್ದಶ ಧರೆಯೊಳಗೆ ಮೆರವುತಿದೆ
ಎರಗುತಿದೆ ಮನವಿರದೆ  ಕರಗುತಲಿದೆ  ದುರಿತಪಾಶ
ಪರಿಯುತಿದೆ ಪೀಯೂಷವು ಸುರಿವುತಿದೆ ಅನುಗಾಲ
ವರಕಲ್ಪ ಕಲ್ಪಕ್ಕೆ ಅರಿಸಿನೋಡಿದರು  ಈ
ಗಿರಿಗೆ ಸಮಾನೆಂದುರು  ಕಾಣೆ  ನಾನಾವಲ್ಲಿ
ಪರಿಪರಿಯುತೆರದಿ ಶೃಂಗಾರಲಂಕಾರ ಸುಂ
ದರಲಕ್ಷಣಗಳಿಂದ ಸರಸದಲಿ ಪೊಪ್ಪುತಿದೆ
ವರಗಿರಿಯತಿಮ್ಮ ತಿರುಮಲ ತಿರುವೆಂಗಳ
ಉರ್ರಗಗಿರಿಯವಾಸ ವಿಜಯವಿಠ್ಠಲರೇಯ
ನಿರುತ ಉತ್ಸಾಹದಲ್ಲಿ ಸುರರೊಡೆಯನಿಪ್ಪ

ಪುರುಷರು ಚಾರಣರು ವರಮುನಿಗಳು ಭೂ
ಸುರರು ಮೊದಲಾದ ಪರಿಪರಿ ಜ್ಞಾನಿಗಳು
ಚರಿಸುವರು ವಿಸ್ತರ ವೈರಾಗ್ಯದಲಿ
ಪರಮ ಪುರುಷ ತಿಮ್ಮಾ ವಿಜಯ ವಿಠ್ಠಲನ
ಸ್ಮರಿಸಿ ಗಿರಿಯಲ್ಲಿ ಪರಗತಿ ಬಯಸುತ್ತ

### ತ್ರಿವಿಡಿ

ಫಲ ಮರ ಗಿಡ ಬಳ್ಳಿ ಖಗಮೃಗ ನಾನಾಕ
ಕುಲದ ಜೀವಿಗಳೆಲ್ಲ ಚರಿಸುವರಮರಾದಿ
ಕುಲದ ಕುಲದವರೆಲ್ಲ ಜನಿಸಿ ಒಂದುರೂಪಿಲಿ
ಬಲು ಭಕುತಿಯಲ್ಲಿ ಸಾಧನ ಮಾಡುತ್ತ
ಸುಲಭರಾಗಿಪ್ಪರು ಆವಾಗ ಸುಜನಕೆ
ಪೊಳದು ಕಂಗಳಿಗೆ ಗೋಚರವಾಗುತ್ತ
ಮಲರಿಗೆ ಎಂದಿಗೆ ಕಾಣಿಸರೂ ಇದರ
ನೆಲಿಯಾ ಬಲ್ಲರು ಹರಿದಾಸರಯ್ಯಾ
ಬಲವಂತ ವೆಂಕಟ ವಿಜಯವಿಠ್ಠಲರೇಯಾ
ಸಲಹೂವ ಈ ಗಿರಿಯ ಸಾರಿದ ಜನರಿಗೆ

### ಅಟ್ಟ

ಉರಗಗಿರಿಯ ಯಾತ್ರಿ ದುರುಳ ಮಾನವರಿಗೆ
ದೊರಕಾದು ದೊರಕಾದು ದೊರಿತಾರೆ ಫಲಿಸಾದು
ಹರಿಗುರು ಭುಕುತಿಲಿ ಪರನಾಗಿ ನಡೆದಾ ಜ
ನರಿಗಲ್ಲದೆ ಮತ್ತರಿಗೆ ಅತಿ ಸುಲಭವೆ
ಧರಧರ ವರ್ನಾ ಶ್ರೀ ವಿಜಯ ವಿಠ್ಠಲ ತಿಮ್ಮ
ಕರುಣ ಮಾಡಲು ಆಶ್ಚರ್ಯಾಗದು ಕಾಣೊ

### ಆದಿ

ಪಾರಾಲೂದ ಇಲ್ಲಿ ಬಂದು ಮೂರು ಹತ್ತು ಯೋಜನ
ಪಾರಿಮಿತವಾಗಿ ಅದ್ರಿ ಧಾರುಣಿಯೊಳಗೆ ಸುಧಾ
ಕರಾನಂತೆ ಪೊಳವುತಿದೆ ಆರುಸಾರಿ ಗೇಲಿ ನಮ
ಸ್ಕಾರ ಪ್ರದಕ್ಷಣೆಸುತ್ತ ವಾರಣದಿಂದ ಮಾಡಲು
ದ್ಧಾರಸಾಗುವ ಕುಲಸಹಿತಾ
ಶ್ರೀರಮಣ ವೆಂಕಟವಿಜಯವಿಠ್ಠಲತಿಮ್ಮ
ದೂರಮಾಡಿ ಪಾಪನಿಕರ ಬಾರದಂತೆ ಪಾಲಿಸುವ

ಜತೆ

ಅನಂತ ಜನ್ಮದ ಪುಣ್ಯ ಫಲಿಸಿದರೆ
ಅನಂತ ಗಿರಿಯಾತ್ರಿ ನೀವ ವಿಜಯವಿಠ್ಠಲ

೩೧

ಭೈರವಿ

ಗಿರಿಯ ಶಿಖರವ ನೋಡಿ ಶಿರವಾಗಿ ಕರವ ಮುಗಿದು
ಮರಳೆ ಸಾಷ್ಟಾಂಗ ನಮಸ್ಕಾರ ಮಾಡಿ
ಪರಮ ಭಕುತಿಯಿಂದ ಕೊಂಡಾಡಿ ನಲಿದಾಡಿ
ಪರಿ ಪರಿ ವಿಧದಿಂದ ನೆನಿಸಿ ನೆನಿಸೀ
ಧರೆಯೊಳಗಿದೆ ಮೇರು ಪರುವತದ ಮಗನೆನಿಸಿ
ಕರಿಸಿ ಕೊಳುತಿದೆ ವೆಂಕಟಾಖ್ಯ ನಾಮಾ
ಸ್ಮರಿಸಿ ಮನ ಬುದ್ಧಿಯಲ್ಲಿ ಪ್ರವೇಶ ಮಾಡಿ ನಿಂ
ದಿರದೆ ವಿಚಿತ್ರಮಯವಾದ ಗಿರಿಯಾ
ಮಿರಿ ಮಿರಿ ಮಿಂಚುತಿದೆ ದಶದಿಕ್ಕಿನೊಳಿದಕೆ
ಸರಿ ಸರಿ ಸರಿಗಾಣೇ ನಿಸ್ಸಂದೇಹಾ
ಸುರ ತರುವಿನಂತೆ ಬೇಡಿದ ಇಷ್ಟಾರ್ಥಗಳೆಲ್ಲಾ
ಕರವುತಿದೆ ಶಬ್ದಾರ್ಥ ತಿಳಿದ ನರಗೇ

ಮೂರು ಕೋಟಿ ತೀರ್ಥಂಗಳು ಉಂಟು ಸುಂ
ದರವಾಗಿ ವೊಪ್ಪುತಿವೆ ಇದರೊಳಗೆ
ಪರಮ ಮುಖ್ಯ ತೀರ್ಥಾ ಚತುರವಿಂಶತಿ ಇಪ್ಪಾವು
ನಿರಯಾ ಕಳವುತ್ತ ವಂದಿಸಿದ ಜನಕೆ
ಪರಮೇಷ್ಠಿ ಗರಡೇಂದ್ರ ತರಣಿ ನಾಲ್ವರು ಚ
ತುರ ದಿಕ್ಕಿನಲ್ಲಿ ಅನಿರುದ್ಧಾದಿ ಯಾ
ಕರುಣ ಶರಣರ ಮೇಲೆ ಮಾಡುತಾ ಪ್ರತಿ ದಿವಸ
ಸಿರಿವಂತರಾಗಿ ಪೂಜಿಸುತಿಪ್ಪರೂ
ಅರಿ ಶಂಖಾ ಗದಾ ಪದುಮಾಧರರಾಗಿ ವಿಲಿಂಗರು
ಚರಿಸುವರು ಪುಣ್ಯಕಾಮರಾಗಿ ಸಂತೋಷದಿ
ವರವೇದ ಶಾಸ್ತ್ರ ಸ್ಮೃತಿಗಳಲ್ಲಿ ನಿರುತರ
ವರ ದೊರದು ಪೇಳುತಿವೆ ವೊಲಿದೊಲಿದೂ
ಅರಸಿ ನೆಂಜಲೂ ಮರ್ಕಟ ಮೆದ್ದರಾದಡೆ ಬಾ
ಹಿರದಲ್ಲಿಪ್ಪಾ ಮದಕರಿ ಸರಿಯೆ
ಉರಗಾ ಪರಿಯಂಕ ಹರಿಗಾಗಿಹ ನೆನದೀರಿ
ಮರುತಾ ದೇವಗೆ ಸರಿ ಎನ್ನಬಹುದೆ
ತಿರುವೆಂಗಳೇಶಾ ಸಿರಿ ವಿಜಯ ವಿಠ್ಠಲರೇಯಾ
ಸ್ಥಿರವಾಗಿ ನಿಲಿಸಿಪ್ಪ ಇರಳು ಹಗಲು ಬಿಡದೆ

ಮಟ್ಟ

ಒಂದೊಂದು ಯುಗಕೆ ಒಂದೊಂದು ಪೆಸರು
ಚಂದವಾಗಿಪ್ಪವು ಪೊಗಳಿದವರಿಗೀಗಾ
ನಂದವೆ ಕೊಡುತಲಿ ಅತಿಶಯವೆನಿಸಿ ವ
ಸುಂಧರದೊಳಗೆ ಸುಲಭವಾಗಿದೆ ಕೇಳಿ
ಒಂದೆರಡು ಎರಡೂ ಯೋಜನ ವಿಸ್ತಾರ
ವಂದಿನಾದರು ಐದು ಸಾರೆ ಪ್ರದಕ್ಷಿಣೆ

ತ್ರಿವಿಡಿ

ಅನಂತ ಜನುಮಕೆ ಸಾಧನ ಕೂಡಾದಲ್ಲದೆ
ಈ ನಗ ದಾರಿಗೂ ದರುಶನವಾಗದು
ಏನೆಂಬೇನಯ್ಯಾ ಇದರ ಮಹಾತ್ಮೆಯನ್ನು
ಸ್ಥಾಣು ಸನಕಾದ್ಯರಿಗೆ ಪೇಳಿ ಮೈಮರೆದಾ
ಮಾನುಷ್ಯನ್ನಾ ಜನಕೆ ಯೆಣಿಸಿ ಪೇಳುವದರಿದೊ
ಆನೆಂತು ವರ್ನಿಪೆನೊ ಕೊನೆ ಮೊದಲು
ಗೆಣಿಸದನಾ ಇಲ್ಲಿ ರಚಿಸಿ ತತ್ವಾ ಬಲ್ಲ
ಜ್ಞಾನಿಗೆ ಮನಸು ಪೂರ್ವಕದಿಂದಲಿ
ದಾನಾ ವಿತ್ತವನ ವಂಶಾ ಆವಾವ ಲೋಕದಲಿ
ಆನಂದಾನಂದದಲೀ ಕ್ರೀಡಿಸುವರೂ
ಶ್ವಾನ ಸೂಕರ ದೇಹಾ ಬಂದಾರವಕೆ ಕೇಳಿ
ಹೀನಾವೆಂಬೋದೇ ಇಲ್ಲಾ ಪ್ರಬಲ ಸಂಸ್ಕಾರವೊ
ಶ್ರೀನಿವಾಸ ನಮ್ಮ ವಿಜಯ ವಿಠ್ಠಲರೇಯಾ
ಕಾಣಿಸಿ ಕೊಂಬನು ಈ ಗಿರಿಯಾ ಸ್ಮರಿಸಿದರಿಗೆ

ಅಟ್ಟ

ಬಲಬಲಿ ಬಲವೈರಿ ಕವಿ ಕವಿಗಾಳು
ಒಲಿದು ವೊಲುಮೆಯಿಂದ ಈ ಶೈಲ ಕಾಣಲು
ಬಲು ಪಂಚಾಮಹಾಪಾತಕದಿಂದ ಕಡೆಬಿದ್ದು
ಮಲರಹಿತರಾಗಿ ವೆಂಕಟನಾಥನ್ನ
ಒಲಿಸಿ ವೇಗದಿಂದ ಸಿದ್ಧರಾದರು ತಮ್ಮ
ಒಳಗಾದೊಡನೆ ಕೂಡಿ ತಾರತಮ್ಯಾದಿಂದಲಿ
ತಿಳಿವದು ಈ ಪರಿ ರಜೋತಮ ಜನರಿಗೆ
ಕಲ ಕಾಲಾ ಬಿಡದಲೆ ನೂರೆಂಟು ಸಾರಿಗೆಲಿ
ಬಳಲಿ ಯಾತ್ರಿಯಾ ಮಾಡಿದರೇನೂ ಎಂದಿಗೆ

ಮೂಜ್ಜಗದೊಳಗಿದೆ ಸರ್ವ ಯಾತ್ರಿಗೆ ಮಿಗಿಲೂ
ಸಜ್ಜನಾ ನಾದಾವ ಈ ಗಿರಿಯಲ್ಲಿ ವೊಂದು
ಹೆಜ್ಜೆ ಇಡಲು ಆವನ ಕುಲ ಕೋಟಿ ಉದ್ಧಾರ
ಆರ್ಜವ ಮಾರ್ಗದಲ್ಲಿ ಸಂಚರಿಸುವರು
ಮಜ್ಜನಾದಿ ಕರ್ಮ ಅಲ್ಪಮಾಡಿದರು ನಿ
ರ್ವ್ಯಾಜ್ಯವಾದ ಪುಣ್ಯ ಮೇರುತುಲ್ಯವಾಗುವದು
ದುರ್ಜನರ ಉಪಹತಿ ಲೇಶ ಮಾತುರವಿಲ್ಲ
ನಿರ್ಜರರು ಮೆಚ್ಚುವರು ಅವಲೋಕಾ ಮಾಡುತಾ
ಅರ್ಜುನ ಸಾರಥಿ ವಿಜಯವಿಠ್ಠಲ ವೆಂಕಟ
ಬೆಜ್ಜರಿಕೆ ಬಿಡಿಸುವಾ ಬಿನ್ನಪ ಕೈಕೊಂಡು

ಜತೆ

ಈ ಗಿರಿ ಯಾತ್ರಿಯಾ ಮಾಡಿದಾ ಜನರಿಗೆ
ನಾಗಶಯನ ವಿಜಯ ವಿಠ್ಠಲ ವೆಂಕಟವೊಲಿವಾ

## ೩೨

ಸಾವೇರಿ

ಗಿರಿರಾಜ ಗಿರಿರಾಜ ತರಣಿಶತ
ಸುರುಚಿರತೇಜ ವೆಂಕಟ

ಆರನು ಕಾಣದೆ ಸಾರಿದೆ ತ್ರಿಜಗವಿ
ಹಾರಿ ಕರಪಿಡಿ ಸಮೀರಾಶನ ಶ್ರೀ

ಶ್ರೀ ಕಮಲಭವಪಿನಾಕಿಮುಖ್ಯ ಸುರಾ
ನೀಕರನಾಳಿದ ಲೋಕೈಕ ಶರಣ್ಯ

ನಂಬಿದ ಭಕ್ತ ಕುಟುಂಬಿ ಅಂಬು

೩೩

ಆನಂದಭೈರವಿ

ಗಿರಿರಾಜ ಚಿತ್ತಉದಾರ ಜೀಯಾ
ನಾ ನಿನ್ನ ಪಾದಕ್ಕೆರಗಿ ಯಾಚಿಸುತಲೆ ಮುಗಿವೆನು ಕೈಯಾ

ಅಪಾರ ಮಹಿಮಾ ಆಪದ್ಬಂಧೋ
ಆಪನ್ನರ ಪಾಲಿಪ ವ್ಯಾಪಾರ ನಿನಗಲ್ಲದೆ ಮತ್ತೊಂದು ಕಾಣೆನು
ಪಾಪದ ಪರ್ವತ ಲೇಪವಾಗದಂತೇ ಪರಿಪಾಲಿಸು
ಶ್ರೀಪತಿ ಅಂಜನ ಗಿರಿರಾಜ

ಕಲಿಯುಗದೊಳಗೀ ಪರ್ವತಕೆಲ್ಲಿ ಸರಿಗಾಣೆನುಯೆಂದು
ನೆಲಸಿದೇ ನೀನೇ ಈ ಸ್ಥಳದಲ್ಲಿ ವೈಕುಂಠಕ್ಕಿಂತ
ವೆಲೆಯು ವೆಗ್ಗಳವೆಂದು ನೀ ಬಲ್ಲೀ ಆದ ಕಾರಣ ಇಲ್ಲೀ
ಜಲಜಭವಾದ್ಯರು ಒಲಿದೊಲಿಯುತ ತಲೆದೂಗುವರಯ್ಯಾ
ಭಳಿರೆ ಕಾಂಚನ ಗಿರಿರಾಜ

ತರುಜಾತಿ ಮೃಗ ಪಕ್ಷಿಗಳಾಕಾರ–ಮೊದಲಾದ ರೂಪದಿ
ಸುರರು ಕಿನ್ನರರು ತಮ್ಮ ಪರಿವಾರ–ಒಡಗೂಡಿ ನಿನ್ನ
ಚರಣಾರಾಧನೆ ಮಾಡಿದ ವಿಸ್ತಾರ–ಈ ಬಗೆ ಶೃಂಗಾರ
ದೊರೆತನ ಠೀವಿಗೆ ಧರಣಿ ಮಂಡಲದಿ
ಸರಿಗಾಣೆನೊ ಹೇ ತಿರುಪತಿ ವೆಂಕಟ

೩೪

ನಾದನಾಮ ಕ್ರಿಯ

ಗಿರಿರಾಯಾ ಗಿರಿರಾಯಾ

ಶರಣಾಗತರಿಗೆ ಕರುಣಾಕರ ವೆಂಕಟ

ಆಪದ್ಬಾಂಧವ ಶ್ರೀಪತಿ ಎನ್ನನು
ಕಾಪಾಡೆಲೊ ಸಕಲಾಪದ್ಧರ ವೆಂಕಟ

ಕಾಮಿತಫಲಪ್ರದ ಈ ಮಹೀತಳದೊಳು
ಸಾಮಜವರದ ಸುಧಾಮನ ಸಖ ಪೊರಿ

ದಾತಗುರುಜಗನ್ನಾಥವಿಠಲ
ಪ್ರೀತನಾಗೊ ನಿನ್ನ ದೂತನು ನಾನೈ

## ೩೫

ಗೋವಿಂದ ನಿನ್ನಾಂದದಲ್ಲಿಡೊ ಗೋವಿಂದ

ಗೋವಿಂದ ಹೃದಯಾರವಿಂದದಲ್ಲಿ
ಇಂದು ಮುಂದು ಚರಣಾರವಿಂದವ ತೋರೊ

ಬೆಟ್ಟದ ದರುಶನ ಲಾಭವು ಕಷ್ಟ
ಪಟ್ಟರು ದೊರೆಯಲಸಾಧ್ಯವು ನೋಡೆ
ಸುಟ್ಟು ಹೋಗುವುದಘ ರಾಶಿಯು
ಪಟ್ಟ ಶ್ರಮವು ಇಷ್ಟಾರ್ಥವು
ದಿಟ್ಟ ಮನವ ಕೊಟ್ಟು ಆಟ್ಟುಳಿಯ ಕಳೆದು
ಮೆಟ್ಟುಮೆಟ್ಟಲನೇರಿ ದಿಟ್ಟಿಪರೊ ನಿನ್ನ

ಪದುಮಜಾಂಡ ಕೋಟಿ ನಾಯಕ ದೇವ
ಶ್ರೀದ ಸೃಷ್ಟ್ಯಾದ್ಯಷ್ಟ ಕರ್ತೃಕ ನೀನೆ
ಆದ್ಯಂತ ಜಗದಾಧಾರಕ ಅಂತರಾತ್ಮಕ ವಿಶ್ವವ್ಯಾಪಕ
ಆದಿಮೂಲ ಚತುಷ್ಪಾತು ಎಂದೆನಿಸಿ ತ್ರಿ –
ಪಾದ ಊರ್ಧ್ವ ಒಂದು ಪಾದ ಇಳೆಯೊಳಿಟ್ಟೆ

ಪದುಮದಲಿ ಪೊಳೆದು ತ್ರಿಜಗ ವಂದಿತನಾಗಿ
ಮೇದಿನಿಯೊಳು ಮೆರೆಯುತಿಹೆ

ಧ್ವಜವಜ್ರಾಂಕುಶ ಯುಕ್ತಲಾಂಛನ ಧೇವ
ಅಬ್ಜಭವಾರಾಧ್ಯ ಚರಣ ದಿವ್ಯ –
ಅಬ್ಜಸಖಕೋಟಿ ಕಿರಣ
ಪಾದಾಭರಣದಿಂದ ಕಿರಣಾ
ತಾ ಝುಗಿಝುಗಿಸುತ್ತ ನೂಪುರ ಕಾಲಂದಿಗೆ
ಗೆಜ್ಜೆ ಸಜ್ಜುಗೊಂಡಿಹ ಮೂರ್ಜಗದೊಡೆಯನೆ ಹರಿ

ತಟಿತ ಕೋಟಿ ನಿಭಸಮ ಕಾಯ
ಕಟಿಯ ದಿವ್ಯ ರತ್ನ ಖಚಿತ ದಟ್ಟಿಯಾ
ತೊಟ್ಟ ಪಟ್ಟೆಪೀತಾಂಬರ ಬಟ್ಟೆಯಾ
ಸೊಂಟ ಪಟ್ಟಿಯಾ ಇಟ್ಟ ಪರಿಯಾ
ಅಟ್ಟಹಾಸದಿ ನಿಂದ ಸೃಷ್ಟಿಗೊಡೆಯ ಮನೋ –
ಭೀಷ್ಟದಾಯಕ ಬೆಟ್ಟದೊಡೆಯನೆ

ಕರಚತುಷ್ಟಯದಲ್ಲಿ ಮೆರೆಯುವಾ ಶ್ರೀಸು –
ದರ್ಶನ ಶಂಖದಿಂದಿರುವಾ ದೀನ
ಶರಣ ಜನರಿಗಭಯಹಸ್ತವಾ
ಕರೆದು ನೀಡುವಾ ಕಾಮಿತಾರ್ಥವ
ಪರಿಪರಿ ಭಾಪುರಿ ಭುಜಗಾಭರಣಾದಿಗಳ
ಧರಿಸಿರುತ ಭಕ್ತಜನರಘಹರಿಸುವ

ವಕ್ಷಸ್ಥಳದಲ್ಲಿ ಶ್ರೀ ವತ್ಸವೂ ಕಂಠ
ದಕ್ಷಿಣದಲ್ಲಿ ಥೋರ ನಕ್ಷತ್ರದಂತಿಹ ಹಾರವೂ
ಕುಕ್ಷಿ ಅಂದವು ಮೋಕ್ಷದಾತೃವೂ
ಅಕ್ಷರವಾಚ್ಯ ತ್ರ್ಯಕ್ಷಾದಿ ಸುರವಂದ್ಯ
ಈ ಕ್ಷಿತಿಗಿಳಿದು ಪ್ರತ್ಯಕ್ಷನಾಗಿ ನಿಂದೆ

ನಿಂದ ಕಸ್ತೂರಿ ತಿಲಕವು ಫಣೆಯಿಂದ ಕಂದುಟಿಯಿಂದ ಒಪ್ಪುವ ಚಂದ
ಪೊಂದಿ ಮಕುಟ ಸರ್ವಾಲಂಕಾರ ಪರಿಪೂರ್ಣ
ಬಂಧ ಮೋಚನ ಹರಿ ಶ್ರೀ ವೇಂಕಟೇಶನೆ

ಪರಿಪರಿ ಮುಕ್ತಜೀವರುಗಳು ಇಲ್ಲಿ
ಪರಿವಾರ ತರುಲತೆ ಶಿಲೆಗಳು ಇನ್ನು
ವಿರಜೆ ಮೊದಲಾದ ಸರ್ವತೀರ್ಥವೂ ಸ್ವಾಮಿ-
ತೀರ್ಥವು ಮೋಕ್ಷದಾತೃವೂ
ಸಿರಿ ವಿರಿಂಚಿ ಈರ ಭವ ಶಕ್ರಾದಿನುತ
ಉರಗಾದ್ರಿವಾಸ ವಿಠ್ಠಲ ಜಗದೀಶನೆ

೩೭

ಬಹಿರಿ ಅ

ಚಿಂತೆಯಾ ಪರಿಹರಿಸೋ, ತಿಮ್ಮಯ್ಯಾ
ಚಿಂತಾಯಕ ಕಂತು ಕಮಲೆಯ ರಾಯಾ

ಸಾಧ್ಯವಲ್ಲದುದನ್ನು ಹಂಬಲಿಸಿ
ಬುದ್ಧಿಭ್ರಾಂತಿಲಿ ಬಲುಸುಖಬಯಸಿ
ಕದ್ದಕಳ್ಳನಂತೆ ವೃಥಾ ಕುದಿದೆ
ಮದ್ದು ಮೆದ್ದವನಂತೆ ಬಳಲಿದೆ

ತಿಳಿದು ಮಾಯದ ಬಲೆಗೆ ಮೈಗೊಟ್ಟೆ
ಬೆಲೆಗಟ್ಟಿ ವೃಥಾ ಹುಚ್ಚುದೈನ್ಯ ಬಟ್ಟೆ
ಆಲಿಸಿ ಮೋಕ್ಷದ ನೆಲೆಯ ಕೇಳದೆ ನಾ
ಕಳವಳಗೊಂಬೆ ಕರುಣಾಸಂಪನ್ನ

ಚಿಂತೆಗೆ ಚಿಂತೆ ಸಹಾಯವಾಗಿ

ಕಾಂಬೋದಿ

ಚಿಕ್ಕ ತಿರುಪತಿವಾಸ – ಶ್ರೀ ವೆಂಕಟೇಶ

ಅಕ್ಕರದಿ ನೀನೆನ್ನ – ತಕ್ಕೈಸಬೇಕೋ

ಕಕ್ಕಸದ ಭವದೊಳಗೆ । ಸಿಕ್ಕಿ ಬಲು ನೊಂದೆನೋ
ರಕ್ಕಸಾಂತಕ ಕೃಷ್ಣ । ಚಕ್ರ ಧರದೇವಾ
ಚೊಕ್ಕ ಮೂರುತಿ ಅಜನ । ಪೊಕ್ಕಳಿಂದಲಿ ಪಡೆದು
ಲಕ್ಕುಮಿಗೆ ಮೀರ್ದ ಪೊಂ । ಬಕ್ಕಿ ದೇರನೆ ಕಾಯೋ

ಸಪ್ತ ಪ್ರಾಕಾರದಲಿ । ಆಪ್ತ ನೀ ನೆಲಿಸಿದ್ದು
ಗುಪ್ತ ಮಹಿಮನೆ ಜಗಕೆ । ವ್ಯಕ್ತನಾಗದಲೇ
ಕ್ಲುಪ್ತಿಯಂದದಿ ಹವಿ । ಭೋಕ್ತೃ ಯಜ್ಞನಿಗೊಲಿದು
ವ್ಯಕ್ತನಾದೆಯೊ ಜಡದಿ । ಅವ್ಯಕ್ತ ಮೂರ್ತೇ

ಕ್ಷಿತಿಪ ಜನಮೇಜಯನು । ವಿಸ್ತರಿಸಿ ಮಂಟಪವ
ಕ್ಷಿತಿಯಮರರೊಡಗೂಡಿ । ಅತುಳ ವಿಭ್ರವದಲೀ
ಕೃತಿಪತಿಯೆ ನಿನ್ನನೂ । ಸ್ತುತಿಗೈದು ಗತಿ ಪಡೆದ
ವಿತತ ಮಂಗಳ ಮೂರ್ತಿ । ಪ್ರತಿರಹಿತ ದೇವಾ

ಭೂಮಿಪತಿ ವರಾಹ । ಸ್ವಾಮಿ ಪುಷ್ಕರಿಣ್ಯಾದಿ
ಆ ಮಹಾ ತೀರ್ಥಗಳ । ವೀಮಾನ ಸ್ಥಿತನಾ
ಈ ಮನೋರೂಪದಲಿ । ನೇಮಾನುಸಂಧಾನ
ಕಾಮಿಸುವೆ ಶ್ರೀರಮಣ । ಭೂಮಿಗ್ವಲ್ಲಭನೇ

ಸರ್ವಜಗ ಸೃಜಿಸುವನೆ । ಸರ್ವವನು ಲಯಿಸುವನೆ

ಜಗದಾದಿ ವಂದ್ಯನಿಗೆ ಶರಣು

ಶರಣು ಜಗದೊಡೆಯ ಶರಣು
ಪನ್ನಗಾ ನಗದೊಡೆಯ ಶರಣು

ಖಗಪ ನಖಾಗ್ರದಲಿ ಮಿಗೆ ಶೋಭಿಸುವ
ತವ ಪದನಖಾಗ್ರಕ್ಕೆ ಶರಣು

ಮೂಡಲಾಗಿರಿಗೆ ಶರಣು
ಗಿರಿಯ ಅಡಿದಾವರೆಗಳಿಗೆ ಶರಣು

ದೃಢಮನದಿ ನಿನ್ನ ಅಡಿದರುಶನಕೆ
ನಡೆವರಡಿಗಳಿಗೆ ಶರಣು

ಮೆಟ್ಟುಮೆಟ್ಟಲಿಗೆ ಶರಣು
ಮನ ಮುಟ್ಟಿ ನೆಟ್ಟನೇರುತಿಹ
ನಿನ್ನಿಷ್ಟ ಭಕುತರಿಗೆ ಶರಣು

ತನು ಕಷ್ಟಹರಿಸಿ ಮನತುಷ್ಟಿಯನು ತೋರ್ವ
ಬೆಟ್ಟದಂದಕ್ಕೆಲ್ಲ ಶರಣು

ಸುರಕಿನ್ನರರ ತರುಶಿಲಾಲತಾಕಾರ ತವ
ಪರಿವಾರಕ್ಕೆಲ್ಲ ಶರಣು

ಶುಕ ಪಿಕನಾದ ಝೇಂಕಾರ
ಸ್ವರ ಶಬ್ದ ವಾಚ್ಯ ತವ ಶರಣು

ಮೆಲ್ಲ ಮೆಲ್ಲನೆ ಭಕ್ತರುಲ್ಲಾಸವನೆ ತೋರ್ವ
ಚೆಲ್ವ ಗಾಳಿಗೋಪುರ ದ್ವಾರಕ್ಕೆ ಶರಣು

ಲೀಲೆಯಿಂದಲಿ ನಿನ್ನನೋಲ್ಗೈಪ

ಹರಿ ಹರೀ ಹರಿ ಎಂದು ಹರಿದಾರಿ ಹಿಡಿದ
ವರ ಅಡಿದಾವರೆಗಳಿಗೆ ಶರಣು

ಪರಿಪರಿ ಬಾಧೆಯಿಂ ತರಳಳನ್ನ ಕಾಯ್ದ ಶ್ರೀ
ನರಹರಿಯ ಚರಣಾರವಿಂದಕ್ಕೆ ಶರಣು

ತಿರುತಿರುಗಿ ತುರುವನು ಕರುವು ಅರಸುವಂತೆ
ತಿರುದಾರಿ ಮೊಣಕಾಲಮುರಿಗೆ ಶರಣು

ಭಕ್ತರಾಪತ್ತಳಿವ ಶಕ್ತಿ ಸಂಪತ್ತೀವ ಉತ್ತಮೋತ್ತಮ
ಭಕ್ತರಾ ಮಂಟಪಕ್ಕೆ ಶರಣು

ಭಕ್ತಿಯಿಂದಲಿ ಸಪ್ತಗಿರಿಯ ದಾಟಿದ ಹರಿ-
ಭಕ್ತ ಜನಸಂದೋಹಗಳಿಗೆ ಶರಣು

ಶಕ್ತಿ ರಹಿತರಾಗಿ ರಿಕ್ತಹಸ್ತದಿ ಬಂದ
ಭಕ್ತರುದ್ಧರಿಸಲು ನಿಂದ ಸಮೀರನಿಗೆ ಶರಣು

ಜೀವರಿವರೆನ್ನವರು ದರುಶನವನೀಯೆಂದು ಕ-
ರವ ಮುಗಿದು ಹರಿಯ ಸ್ತುತಿಸುವಗೆ ಶರಣು

ಪಾವನಾ ಮೂರ್ತಿಯನು ಮಾನಸದಿ ಧೇನಿಸಲು
ಭಾವಶುದ್ಧಿಯನೀವ ಜೀವೇಶನಿಗೆ ಶರಣು

ಸಚ್ಚಿದಾನಂದಾತ್ಮ ಶ್ರೀಮುಕುಂದನ ದಿವ್ಯ
ಅರಮನೆಯ ಮಹಾದ್ವಾರಕ್ಕೆ ಶರಣು

ಅಚ್ಯುತನ ರಾಣಿ ಸಿರಿ ಮೆಚ್ಚಿ ತುತಿಸುವ
ಅವ್ಯಾಕೃತಾಕಾಶಾವರಣಕ್ಕೆ ಶರಣು

ತೀರ್ಥ ಮಹಿಮೋಪೇತ ಸ್ವಾಮಿ ಪುಷ್ಕರಣೀ-
ತಟ ವಿರಾಜಿತ ಅಶ್ವತ್ಥವೃಕ್ಷರಾಜನಿಗೆ ಶರಣು

ಭೂದೇವಿಯಾರಮಣ ಆದಿ ಶ್ರೀ ಭೂವರಹ

ಸರ್ವ ಗುಣ ಸಂಪೂರ್ಣ ವೈಕುಂಠ ಮಂದಿರನ
ಸ್ವರ್ಣಮಯ ಸುಪರ್ಣ ಸ್ತಂಭಕ್ಕೆ ಶರಣು ೨೫

ಸ್ವಾಮಿ ಸಂದರ್ಶನಕ್ಕೆ ಗಮನ ನಿರ್ಗಮನವುಳ್ಳ
ಸುಮನಸರ ಭಕ್ತಜನ ಸಂಘಕ್ಕೆ ಶರಣು ೨೬

ಅಂತರಾವರಣಕ್ಕೆ ಶರಣು ೨೭

ಕಾಂಚನರೂಪ ಸುವರ್ಣಮುಖರೀ ನದಿ ವಿ–
ರಜಾತೊಟ್ಟಿತೀರ್ಥ ಸಮಸ್ತ ತೀರ್ಥಗಳಿಗೆ ಶರಣು ೨೮

ಸುಮನಸರು ಹೃನ್ಮನದಿ ಧೇನಿಸುವ ಕಾಂಚನ
ವಿಮಾನದಲಿ ಬೆಳಗುತಿಹ ಶ್ರೀ ಶ್ರೀನಿವಾಸನಿಗೆ ಶರಣು ೨೯

ಬಗೆಬಗೆ ಭಕ್ತರಪರಾಧಗಳ ಹರಿಸೆ
ಭೂಗಿರಿಯ ಸೇರಿದ ಶ್ರೀಹರಿಗೆ ಶರಣು ೩೦

ವಾರಿಯೊಳಗ್ಯೋಲಾಡಿ ಶ್ರೀಶೈಲದೊಳು ನಿಂ–
ತ ಶ್ರೀಲೋಲನಾಗಿರ್ಪಗೆ ಶರಣು ೩೧

ಬೆಟ್ಟ ಬೆನ್ನಿಲಿ ಹೊತ್ತು ಮೆಟ್ಟಿ ಈ ಗಿರಿಯನು
ಶ್ರೇಷ್ಠನೆನಿಸಿದ ದಿಟ್ಟ ಮೂರುತಿಗೆ ಶರಣು ೩೨

ಧರೆಯ ಕೆದರೀ ಬಂದು ಗಿರಿಯ ವರಹನ ಬೇಡಿ
ಮರುಳುಮಾಡಿದ ಮಾಯಾರಮಣಗೆ ಶರಣು ೩೩

ತರಳರೂಪವ ಕೆಡಿಸಿ ಗಿರಿಯ ಹುದರದೊಳಡಗಿ
ಸುರಜ್ಯೇಷ್ಠನೆಂದೀಗ ಪೂಜೆಗೊಂಬುವಗೆ ಶರಣು ೩೪

ವಟಪತ್ರಶಾಯಿ ನೀ ವಟುವಾಗಿ ಬೇಡಿ ಭ–
ವಾಟವಿಯ ದಾಟಿಸಲು ನಿಂದವಗೆ ಶರಣು ೩೫

ಪೆತ್ತ ಮಾತೆಯ ಹರಿಸಿ ಮೆತ್ತನಿಲ್ಲಿಗೆ ಬಂದು

ಗುಟ್ಟಾಗಿ ಪಾಲ್ಕುಡಿದು ಪಟ್ಟನಾ ನೆಪದಲ್ಲಿ
ದೃಷ್ಟಿ ಗೋಚರಸಾದ ಪಟ್ಟದೊಡೆಯನಿಗೆ ಶರಣು

ಉತ್ತಮಾ ಸ್ತ್ರೀಯರಿಗೆ ನಾಚಿ ಬತ್ತಲೆಯಾಗಿ
ಹುತ್ತದೊಳು ಅಡಗಿ ಮೆರೆದವಗೆ ಶರಣು

ಸಿರಿಯ ಹಯವನು ಮಾಡಿ ಚರಿಸಿ
ಗಿರಿಯೊಳು ಹಯವ ಅರಸಿಯಿಂದ ಹರಿಸಿಕೊಂಡವಗೆ ಶರ

ಹಿರಣ್ಯಗರ್ಭನ ಜನಕ ಸನ್ಮಹಿಮ ಸನ್ನಿಧಿಯ
ಕನಕಮಯ ಕವಾಟಕ್ಕೆ ಶರಣು

ತಟಿತ್ಕೋಟಿನಿಭ ಪೂರ್ಣ ಸಂಪೂರ್ಣ ಲಕ್ಷಣ
ಸನ್ಮಂಗಳಾ ಸುಂದರ ಮೂರ್ತೇ ತವ ಶರಣು

ಪ್ರಹ್ಲಾದ ನಾರದ ವಸು ಋಷಿ ಗಂಧರ್ವಾದಿ
ಮುಕ್ತಾ ಮುಕ್ತಗಣ ವಂದಿತಾ ತವ ಶರಣು

ನಂದ ಸುನಂದನ ಜಯ ವಿಜಯಾದಿ ಪಾ–
ರ್ಷದ ಯುಕ್ತ ಶ್ರೀವಿರಿಂಚಿ ಶೇಷ ಶಕ್ರಾದಿ ಸಂಸೇವ್ಯಮಾನ
ತವ ಶರಣು

ಸರ್ವಾಂಗುಳ್ಯಂಗುಷ್ಠದಳವಿಲಸಿತ ಸತ್ಪಾದ–
ಪಂಕಜ ಧ್ವಜ ವಜ್ರಾಂಕುಶಾದಿ ಸುಚಿನ್ಹ ಚಿನ್ಹಿತ ತವ ಶರಣು

ಚಾರು ಜಾನುಯುಗ ಜಂಘೆಯುಗಳ ಸಂಯುಕ್ತ ತುಂಗ
ಗುಲ್ಫಾರುಣನಖ ಧೃತಾ ದೀಧಿತಿಯುಕ್ತ ತವ ಶರಣು

ಕಂಬುಕಂಠ ನಿಮ್ನನಾಭಿವಳಿ ಮತ್ ಪಲ್ಲವೋದರ
ಬೃಹತ್ ಕಟಿ ತಟ ಶ್ರೋಣಿ ಕರಭೋರು ದ್ವಯಾನ್ವಿತ
ತವ ಶರಣು

ವಿಭ್ರಾಜಮಾನ ಶ್ರೀವತ್ಸ ವಕ್ಷ ಕೌಸ್ತುಭ

ತವ ಶರಣು ೫೦

ಚಾರುಪ್ರಸನ್ನವದನ ಮಂದಹಾಸ ನಿರೀಕ್ಷಣ ಸು–
ಭದ್ರ ನಾಸ ಚಾರುಸುಕರ್ಣ ಸುಕಪೋಲ ಅರುಣ ತವ ಶರಣು ೫೦

ಸಹಸ್ರ ಫಣ ಶಿರೋಮಣಿ ಪ್ರಭಾನ್ವಿತ ಶೇಷಶೈಲಸ್ಥ
ಘನಶ್ಯಾಮ ಪೀತಕೌಶೇಯವಾಸ ಶ್ರೀಪರಮ ಪುರುಷ
ಶಾಂತ ಪದ್ಮಪತ್ರಾಯತೇಕ್ಷಣ ತವ ಶರಣು ೫

ಅನಂತ ವೇದೋಕ್ತ ಮಹಿಮೋಪೇತ ಸರ್ವ ಸ್ವರವರ್ಣ
ಸರ್ವ ಶಬ್ದ ವಾಚ್ಯ ಪ್ರತಿಪಾದ್ಯ ಶರಣು ೫

ಸಚ್ಚಿದಾನಂದಾತ್ಮ ಸರ್ವಸುಗುಣೋಪೇತ ಸರ್ವ
ಹೃತ್ಕಮಲಸ್ಥಿತ ತವ ಶರಣು ೫

ಅಣು ತ್ರ್ಯಣು ತೃಟಿ ಲವ ಕ್ಷಣಾದಿಕಾಲ ಮಹ–
ತ್ಕಾಲಾತ್ಮಕ ನಿತ್ಯನಿರ್ಮಲ ಮೂರ್ತೇ ತವ ಶರಣು ೫

ಸೃಷ್ಟ್ಯಾದ್ಯಷ್ಟಕರ್ತೃಕ ಸ್ರಷ್ಟ ಶ್ರೀ ಪರ–
ಮೇಷ್ಠಿವಂದಿತ ತವ ಶರಣು ೫

ವಿಶ್ವ ತೈಜಸ ಪ್ರಾಜ್ಞ ತುರ್ಯಾ
ದ್ಯಷ್ಟ ರೂಪಾತ್ಮಕ ತವ ಶರಣು ೫

ಭಯಕೃತ್ ಭಯಹಾರಿ ಭಕ್ತಜನಕಾಧಾರಿ
ಕಂಸಾರಿ ಮುರಾರಿ ಶ್ರೀಹರಿಯೆ ಶರಣು ೫

ಭವರೋಗ ಭೇಷಜ ಭಕ್ತಜನಬಂಧೋ
ಮುಚುಕುಂದ ವರದ ಗೋವಿಂದ ಶರಣು ೫

ಮುಕ್ತಾ ಮುಕ್ತಾಶ್ರಯ ಭಕ್ತಜನ ಸಂರಕ್ಷಣಾ
ವ್ಯಕ್ತಾವ್ಯಕ್ತ ಮಹಿಮ ತವ ಶರಣು ೬

ಕ್ಷರಾಕ್ಷರಪುರುಷಪೂಜಿತಪಾದ
ಪುರಾಣಪುರುಷೋತ್ತಮನೆ ತವ ಶರಣು

ರವಿಕೋಟಿಕಿರಣ ರತ್ನಕನಕಮಯ ಮಕು-
ಟಾನ್ವಿತ ತವ ಶಿರಸ್ಸೀಗೆ ಶರಣು

ಇಂದುಮಂಡಲಭಾಸ ಮಂದಸ್ಮಿತ
ಸುಂದರಾನಂದ ಆನನಕೆ ಶರಣು

ಲೋಲ ವಿಶಾಲಫಾಲ ಕಸ್ತೂರೀ ತಿಲಕಾಂಕಿತ
ಶ್ರೀಲೋಲ ಶರಣು

ಪೂವಿಲ್ಲನಾಬಿಲ್ಲ ಪೋಲ್ವ ಹುಬ್ಬು ಕಂಜ-
ದಳದೋಲ್ ಚಂಪಕಾಮುಗುಳಿಗೆಣೆನಾಸಿಕಕೆ ಶರಣು

ಕನಕರತುನ ಮಣಿಖಚಿತ ಮಕರ
ಕರ್ಣಕುಂಡಲಾನ್ವಿತ ತವ ಕರ್ಣಕ್ಕೆ ಶರಣು

ಆಕುಟಿಲರ ನಿಷ್ಕಂಟಕ ಶ್ರೀ ವೇಂಕಟೇಶಾ ನಿನ್ನ
ಶ್ರೀಕಂಠದ ಕೌಸ್ತುಭಾಭರಣಯುಕ್ತ ಕಂಠಕ್ಕೆ ಶರಣು

ಅಜಭವಾದಿಗಳ ಭುಜಬಲನು ನೀನು
ಭುಜಗ ಭೂಷಣ ಬಾಹು ಪರಿಯುಕ್ತ ತವ
ಭುಜಯುಗಕ್ಕೆ ಶರಣು

ನಕ್ರಸಂಹಾರಿ ಜಗಚ್ಚಕ್ರ ನಿನ್ನದು ತ್ರಿ-
ವಿಕ್ರಮನೆ ಕರಗತ ಚಕ್ರ ಶಂಖಕ್ಕೆ ಶರಣು

ಕುಕ್ಷಿಯೊಳು ಬ್ರಹ್ಮಾಂಡ ಕೋಟಿಯನು ಇಟ್ಟಂಥಾ
ಲಕ್ಷ್ಮೀವಕ್ಷಸ್ಥಳ ಶ್ರೀವತ್ಸಕ್ಕೆ ಶರಣು

ಕನಕರತ್ನದಹಾರ ಪದಕ ಮೌಕ್ತಿಕಾ ಹಾರ
ಕಲ್ಹಾರ ಪುಷ್ಪ ಮಾಲಾಯುಕ್ತ ತವ ಕುಕ್ಷಿಗೆ ಶರಣು

ಯುತ ಪದ್ಮಸಂಭವ ಬಂದ ಪದ್ಮನಾಭಿಗೆ ಶರಣು

ಇಟ್ಟ ರತ್ನಾ ಪಟ್ಟಿ ತೊಟ್ಟ ಗೆಜ್ಜೆಯ ಪಟ್ಟಿ
ಇಟ್ಟು ಮೆರೆಯುವ ದಿಟ್ಟಕಟಿಯ ಭಾಗಕ್ಕೆ ಶರಣು

ಉಟ್ಟ ಪೀತಾಂಬರ ನೆರಿಗೆ ತಿದ್ದಿದ ತೆರ ನೆಟ್ಟನಿಂತಿಹ
ಬಟ್ಟು ಜಾನುಜಂಘೆ ಕಟಿಗೆ ಶರಣು

ಝುಗ ಝುಗಿಪ ರತುನ ವೈಜಂತಿಯು ಧೃತ ಕ-
ಟಕ ರತ್ನಾಭರಣಯುಕ್ತ ಕರಯುಗ್ಮಕ್ಕೆ ಶರಣು

ಪರಿಪರಿ ಅಭಯವ ಭಕ್ತರಿಗೆ ಕೊಡುವ ಕನಕರತ್ನಾ-
ಭರಣಯುಕ್ತ ಹಸ್ತಕ್ಕೆ ಶರಣು

ಗೆಜ್ಜೆ ಕಾಲಂದಿಗೆ ಸಜ್ಜುಗೊಂಡಿಹ ನಿನ್ನ
ಅಬ್ಜಭವಾರಾಧ್ಯ ತವ ಪಾದಕ್ಕೆ ಶರಣು

ಧ್ವಜ ವಜ್ರಾಂಕುಶಯುಕ್ತ ಅಬುಜಾಂಡ ಕಟಹ
ಭೇದಿಸಿದ ರವಿಕೋಟಿ ಭಾಸ ತವ ಪಾದನಖಕ್ಕೆ ಶರಣು

ಜಲದೊಳು ಹೋರಾಡಿ ಭವಜಲದಲ್ಲಿ ಬಿದ್ದವರ
ಸುಲಭದಿಂದೆತ್ತಲು ನಿಂದ ಸಿರಿವಲ್ಲಭಗೆ ಶರಣು

ಕಮಠರೂಪದಿ ಭೂಮಿ ತಂದು ಭಕುತರ
ಕರ್ಮಭಾರ ಹರಿಸಿ ಪೊರೆವ ಧರ್ಮಮೂರುತಿಗೆ ಶರಣು

ವರಹಮೂರುತಿ ನಿನ್ನ ಇರವನ್ನೆ ಮರೆ ಮಾಡಿ
ವರಹ ಕೊಟ್ಟವರಿಗೆ ದರುಶನವ ಕೊಡುವವಗೆ ಶರಣು

ನಂಬಿಹರ ಬೆಂಬಲನು ಎಂತೆಂದು ಸ್ಥಂಭದಲಿ
ಬಂದು ಗಿರಿಯಲಿ ನಿಂದ ಗೋವಿಂದಗೆ ಶರಣು

ಬೇಡುವರ ಕಷ್ಟ ನೋಡಿ ಅಭಯವ ನೀಡಿ

ಶರಧಿಗೆ ಸೇತುವೆಯ ಕಟ್ಟಿ ದಶಶಿರನ ವಧಿಸಿದ
ಕರವೀರಪುರ ಲಕ್ಷ್ಮಿಯರಸನಿಗೆ ಶರಣು

ಗೋಕುಲದ ಕ್ರೀಡೆ ಸಾಕಾಗದಲೆ ಬಂದು ಈ
ಆಕಾಶರಾಜನ ಜಾಮಾತನಾದವಗೆ ಶರಣು

ಬುದ್ಧಜನರ ಅಪಬುದ್ಧರನೆ ಮಾಡಿ ಜಗ
ಉದ್ಧರಿಸಲು ನಿಂದ ಶುದ್ಧಮೂರುತಿಗೆ ಶರಣು

ಹರಿಯ ಬೆನ್ನೇರಿ ಭೂಭಾರವನೆ ಹರಿಸಿ ಮೇಲು–
ಗಿರಿಯಲಿ ನಿಂದ ಶ್ರೀಹರಿಗೆ ಶರಣು

ವಾಸುಕೀ ಶ್ವೇತಾದಿ ಸರ್ಪ ಜಾತಿಗಳುಳ್ಳ ಪಾತಾಳಲೋಕ–
ಕಾಶ್ರಯ ತವ ಪಾದಮೂಲಕ್ಕೆ ಶರಣು

ಅಶ್ವ ಗಜ ಉಷ್ಟ್ರಾದಿ ಪ್ರಾಣಿಗಳಿಗಾಗಾರ
ರಸಾತಳ ಲೋಕಕಾಶ್ರಯ ತವ ಪಾದಾಗ್ರಕ್ಕೆ ಶರಣು

ತಕ್ಷಕ ಕಾಳಿ ಸುಷೇಣಾದಿ ಉರಗಾಧಿಪರು ವಿಹರಿಸುವ
ಮಹಾತಳ ಲೋಕಕಾಶ್ರಯ ತವ ಪಾದಗುಲ್ಫಕ್ಕೆ ಶರಣು

ಅನಲಾಕ್ಷವೈರಿ ತ್ರಿಪುರರು ವಿಹರಿಸುವ ತಳಾ–
ತಳ ಲೋಕಕಾಶ್ರಯ ತವ ಜಂಘದ್ವಯಕ್ಕೆ ಶರಣು

ವಾಮನನ ಪೂಜಿಸಿ ಕೃಷ್ಣಂಗೆ ಮಸ್ತಕವಿತ್ತ ಧನ್ಯ
ಬಲೀಂದ್ರ ನಿಂತ ಸುತಳ ಲೋಕಕಾಶ್ರಯ ತವ ಜಾನುಗಳಿಗೆ

ಬಲನೆಂಬ ದನುಜನಿಂ ಪುಟ್ಟಿದ ಮಾಯ್ಗಳು ಕ್ರೀಡಿಪ ವಿ–
ತಳ ಲೋಕಕಾಶ್ರಯ ತವ ಊರುದ್ವಯಗಳಿಗೆ ಶರಣು

ಮೃಗಪಶುಜಾತಿ ದೈತ್ಯದಾನವ ಕದ್ರು ತುಂ–
ಬಿಕೊಂಡಿಹ ಅತಳಲೋಕಕಾಶ್ರಯ ತವ ಶ್ರೋಣಿ
ದೇಶಕ್ಕೆ ಶರಣು

ದ್ರವದಿಕ್ಪಾಲಕರು ಋಷಿಸಪ್ತ ನವಗ್ರಹರು ಸರ್ವರೋಲ್ಲಿಪ
ಸುವರ್ಲೋಕಕಾಶ್ರಯ ತವ ನಾಭಿಕಮಲಕ್ಕೆ ಶರಣು          ೧೦

ಸುರನಿಕರಾದಿ ಪುರುಹೂತ ಕರಿಐರಾವತ ಶಚಿ ಸೂತ
ಮಾತಲಿ ನಂದನವನ ಸುಶೋಭಿತ ಸುರಲೋಕಕಾಶ್ರಯ
ತವ ಉದರ ಭಾಗಕ್ಕೆ ಶರಣು          ೧೦

ಸರ್ವವೇದೋಚ್ಚಾರ ಗುಣಗಾನಮಾಳ್ಪ ಋಷಿಗಣಯುಕ್ತ
ಶಕ್ರಾದಿ ದೇವತೆಗಳು ಚಿತ್ರ ವಿಚಿತ್ರ
ಸನಕಾದಿ ಮುನಿಗಳ ಮಹರ್ಲೋಕಾಶ್ರಯ ತವ ಕೌಸ್ತುಭ
ಭೂಷಿತ ಕಂಠಕ್ಕೆ ಶರಣು          ೧೦

ಪದಮಲಾನಂದ ಸಾಧನದಿಂದ ಸರ್ವಗುಣಗಣ
ಚರಿತ ನುತಿಪ ಮುಕ್ತ ಜೀವರ ಭರಿತ ಜನ-
ಲೋಕಕಾಶ್ರಯ ತವ ದಿವ್ಯ ವದನಕ್ಕೆ ಶರಣು          ೧೦

ನಿಟಿಲನೇತ್ರ ನಿರುತ ಸಕಲ ಋಷಿಗಣಯುಕ್ತ
ಭದ್ರಮೂರುತಿಯನು ಸ್ತುತಿಸುವ ತಪಲೋಕಾ-
ಶ್ರಯ ತವ ಲಲಾಟಕ್ಕೆ ಶರಣು          ೧೦

ಚತುರಾನನು ಚತುರ ಮೂರುತಿಯನ್ನು ಸ್ತುತಿಸುತ್ತ
ಚತುರದಶ ಲೋಕಾಧಿಪತ್ಯವನ್ನು ಮಾಳ್ಪ ಸತ್ಯ-
ಲೋಕಕಾಶ್ರಯ ತವ ಶಿರಸ್ಸಿಗೆ ಶರಣು          ೧೦

ಶೀರ್ಷ ಮೊದಲು ಪಾದಮೂಲ ಮಧ್ಯದ
ಸರ್ವ ಮಂಗಳಾಂಗೋಪಾಂಗಕ್ಕೆಲ್ಲ ಶರಣು          ೧೦

ತತ್ತದಂಗಾಶ್ರಿತ ತತ್ತ್ವರಂತರ್ಯಾಮಿ ತತ್ತತ್
ಜಗತ್ಕಾರ್ಯ ಕಾರಣರೂಪಕ್ಕೆ ಶರಣು          ೧೦

ಪಾಹಿ ಶ್ರೀ ವೇಣುಗೋಪಾಲ ಕೃಷ್ಣ ತವ ಶರಣು          ೧೦

ಪಾಹಿ ಶ್ರೀ ಜಯತೀರ್ಥ ವಾಯುವಂತರ್ಗತ

ಉರಗಾದ್ರಿವಾಸ ವಿಠಲ ತವ ಶರಣು ಶರಣೂ

## ೩೯

**ಶಂಕರಾಭರಣ**

ಜಯ ಜಯ ವೆಂಕಟರಮಣ  ಜಯತು ಪನ್ನಂಗ ಶಯನಾ
ಜಯತು ಭಾರ್ಗವಿ ರಮಣಾ  ಜಗದಾಭಿ ರಮಣಾ

ಲೋಕಾನಾಯಕ ಸ್ವಾಮಿ  ವೈಕುಂಠಾದಿಂದ ಬಂದೂ
ಏಕಾಂತವಾನಾಡಿದ  ಲಕ್ಷ್ಮೀಯಾರೊಡನೇ

ಧರೆಗೆ ವೈಕುಂಠಾದ ಚರ್ಯವ ತೋರುವೆನೆಂದು
ಶಿರಿಮಹಾಲಕ್ಷ್ಮಿಯೊಡನೆ  ಸಂಧಿಸಿದಾನೂ

ಸ್ವಾಮಿಕಾಸಾರದಲೀ   ಧಾಮಾವಾ ರಚಿಸೂವೆ
ಆ ಮಹಾ ವೈಕುಂಠಾವ ಅಗಲೀ ಬಂದೂ

ವತ್ಸರ ಕಾಲದಲೊಂದು   ವುತ್ಸವ ಮಾಡುವೆನೆಂದು
ಇಚ್ಛೆ ಮಾಡಿದನೂ ವೆಂಕಟ ಇಂದಿರೆ ಗೂಡಿ

ನವರಾತ್ರಿ ದಿವಸದಲೀ  ವಿವಾಹಾ ಲಗ್ನವ ರಚಿಸೀ
ಅವನಿಯೊಳು ಡಂಗುರವನ್ನು ಹೊಯಿಶೀದ ಸ್ವಾಮೀ

ಕಾಶೀ ಕರ್ನಾಟಕದ  ದೇಶಾ ದೇಶದ ಜನರು
ಶ್ರೀಶಾನುತ್ಸವಕೇ ಜನರು ವದಗಿದರಾಗಾ

ಹದಿನಾಲ್ಕು ಲೋಕಾದ  ಪದುಮಜಾದಿಗಳೆಲ್ಲಾ
ಮದುವೆಯಾ ದಿಬ್ಬಣದಾ ಜನರು ಬಂದರಾಗಾ

ಗರುಡಾ ಕಂಭದ ಸುತ್ತಾ  ಪರಿಪರಿ ವೈಭವದಿಂದ
ಗಿರಿಯಾ ವೆಂಕಟಗೇ ಕಂಕಣ ಕಟಿದರಾಗಾ

ಕಾಳ ತಮ್ಮಟ ಕಾಳ ಭೋರಂಬೋ ವಾದ್ಯಗಳೂ
ವರ ನಾರಿಯರು ಸುತ್ತಾಗ್ಹಾಡುತಿರಲೂ ೧೦

ಚಿನ್ನದ ಕರಿಮಣಿ ರನ್ನ ಮಂಗಳಸೂತ್ರ
ಹಿರಿಯಾ ವೆಂಕಟನು ಲಕ್ಷ್ಮಿಗೆ ಕಟ್ಟಿದ ನಗುತಾ ೧೧

ಮುತ್ತಿನಾ ಕರಿಮಣಿ ರತ್ನ ಮಂಗಳಸೂತ್ರಾ
ಸ್ವಾಮಿ ವೆಂಕಟ ಲಕ್ಷ್ಮಿಗೆ ಕಟ್ಟಿದ ನಗುತಾ ೧೨

ಅಂತರಾ ಮಾರ್ಗದೊಳೂ ನಿಂತು ದೇವತೆಗಾಳು
ಸಂತೋಷದಿಂದಲಿ ಜಯ ಜಯವೆಂದು ಪಾಡಿದರಾಗ ೧೩

ಅಂಗಾನೆ ಶ್ರೀಭೂಮಿ ರಂಗಾಮಂಟಪದೊಳಗೆ
ಭಂಗಾರಾ ಗಿರಿಯಾ ವೆಂಕಟ ವಪ್ಪಿದ ಸ್ವಾಮಿ ೧೪

ಅತಿರಸ ಮನೋಹರ ಮಿತಿಯಿಲ್ಲದ ಪದಾರ್ಥಗಳೂ
ಸತಿಯಾರೆಲ್ಲರು ಭೂಮಕೆ ತಂದು ಬಡಿಸಿದರಾಗ ೧೫

ಬೆರೆದ ನಾರಿಯರೆಲ್ಲ ಹರಿಭೂಮಾನಂತರದೀ
ಭರದಿ ವುರುಟಾಣಿಗೆ ಅಣಿಮಾಡಿದರಾಗಾ ೧೬

ಮಿತ್ರೆಲಕ್ಷ್ಮಿಗೆ ತಕ್ಕ ಹಿರಿಯರು ಪೇಳಲು
ಛಂದದಿಂದಲಿ ಅರಿಶಿನ ಕಲಸಿ ನಿಂತಳಾಗ ೧೭

ದೊಡ್ಡ ಪನ್ನಗ ನಗವಾ ಶೇರಿದ ಮಹರಾಯ
ದುಡ್ಡು ದುಡ್ಡಿಗೆ ಬಡ್ಡಿಯನ್ನು ದುಡಿವಾ ಲೋಭಿ ೧೮

ವಂಚಿಸಿ ಜನರನ್ನು ಲಂಚಾ ಲಾವಣಿ ತೆಗೆದು
ಹಿಂಚಾಸಿ ವರಕೊಡುವಾ ಹಿತದಾದೇವಾ ೧೯

ಬಡವ ಬಲ್ಲಿದರೆಂದು ಬಿಡದಾಲೆ ಅವರಿಂದ
ಮುಡುಪು ಹಾಕಿಸಿಕೊಂಡುಮುಂದಕೆ ಬಿಡುವೋ ದೇವಾ ೨೦

ಅನ್ನವೆಲ್ಲವ ಮಾರಿ ಹೊನ್ನುಕಟ್ಟುವೆಯಲ್ಲೊ

ನಿನ್ನಾ ಕೃಪಣಾತನಕೆ ನಾನು ಎಣೆಗಾಣೆನೋ

ಇಪ್ಪತ್ತು ದುಡ್ಡಿಗೆ ಶೇರು ತೀರ್ಥವ ಮಾರಿ
ದುಡ್ಡು ಕಟ್ಟಿ ಜಾಳಿಗೆ ಘಳಿಸುವ ಜಾಣ ನೀನೂ

ಆಟ್ಟಾ ಮಡಿಕೆಯೆಲ್ಲಾ ಕುಟ್ಟಿ ನಾಮವ ಮಾಡಿ
ಘಟ್ಟಿಯಾಗಿ ಗಂಟು ಘಳಿಸುವ ಘನವಂತಾ

ದೇಶದೊಳು ನಿಮ್ಮಂಥಾ ಆಶೆ ಉಳ್ಳವರಿಲ್ಲಾ
ಕಾಸುಕಟ್ಟಿ ಕವಡೆ ಗಂಟು ದುಡಿವ ಲೋಭಿ

ಮಡದಿ ನಾನಿರಲಿಕ್ಕೆ ಕಡಿಮೆ ಯೇನಾಗೋದು
ಬಡತನ ನಿನಗೆ ಯಾತಕೆ ಬಂತೂ ಸ್ವಾಮೀ

ನಾರೀಯಾ ನುಡಿ ಕೇಳಿ ವಾರೆ ನೋಟದಿ ನೋಡಿ
ಮೋರೆ ತಗ್ಗಿಸಿ ವೆಂಕಟ ಮುನಿದು ನಿಂತಾ

ಕಡುಕೋಪಾ ಮಾಡುವರೇ ಹುಡುಗಾನೆಂತಾಡುವರೆ
ಕೊಡಲೀಯಾ ಪಿಡಿವಾರೆ ನಾನು ನುಡಿದಾ ನುಡಿಗೇ

ಕಣ್ಣಾನೆ ಬಿಡಬ್ಯಾಡ ಬೆನ್ನ ತೋರಲಿ ಬ್ಯಾಡಾ
ಇನ್ನು ಮುಖವಾ ತಗ್ಗಿಸ ಬ್ಯಾಡ ಇತ್ತ ನೋಡೂ

ಎನ್ನರಸಾ ಹೊನ್ನರಸಾ ಚೆನ್ನಿಗ ವೆಂಕಟರಾಯಾ
ನಿನ್ನ ಪೋಲುವರ್ಯಾರೂ ಜಗದೊಳು ನೀಲಾಗಾತ್ರಾ

ಎನ್ನರಸಾ ಚೆನ್ನರಸಾ ಚೆನ್ನಿಗ ವೆಂಕಟರಮಣಾ
ನಿನ್ನ ಮುದ್ದು ಮುಖವ ತೋರೊ ಅರಿಶಿನ ಹಚ್ಚೇನು

ಯೆನ್ನುತ ಅರಿಶಿನ ಹಚ್ಚಿ ಕುಂಕುಮವಿಟ್ಟು
ರನ್ನ ಹಾರವ ಹಾಕಿ ತಾನು ಕುಳಿತಳಾಗಾ

ಮಂಥರಧರ ತಾನೂ ಛಂದದರಿಶಿನ ಪಿಡಿದೂ
ಇಂದಿರಾ ದೇವಿಯನು ಮಾತನಾಡಿಸಿದಾ

ನಡುಗಿ ಮೋರೆಯ ತಗ್ಗಿಸಲಿಹುದೆ ನಾಚಿಕೆ ಯಾಕೆ ೩

ಭಾಗ್ಯಾದ ಮೊಬ್ಬೀಲಿ ಬಾಗಿ ನೀ ನಡೆಯಾದೇ
ಅಗ್ಗಳಿಕೆ ಮಾತುಗಳನ್ನು ಆಡಿದೆಯಲ್ಲೇ ೩

ಮಿಂಚಿನಂದದಿ ಬಹಳಾ ಚಂಚಲ ಬುದ್ಧ್ಯವಳೇ
ವಂಚಿಸೂವ್ರೊಳೆ ಜಗವಾ ವಾರಿಜಾಕ್ಷೀ ೩

ಭಂಗಾರಾ ಮುಡುಪಿಗೆ ಎನ್ನ ಕಂಗೊಳಿಸೀಗಾ
ಹಿಂಗಾದೆ ಮಂಕು ಮಾನವರ ಮಾಡುವುದರಿದೇ ೩

ಮುಡಿಗೆ ದಂಡೆಯ ಮುಡಿಶಿ ಎಡದ ಕೈಯ್ಯಲಿ ಬ್ಯಾಗಾ
ತೊಡಕ ಕಂಚುಕ ವೆಂಕಟ ಬಿಗಿದಾ ನಗುತಾ ೪

ತಾಂಬೂಲಾವನೆ ಮೆದ್ದು ಮಡದೀಯಾ ಮುಖಸೂಸೆ
ಇಂಬೀಲ್ಹಚ್ಚೆ ಬರೆದರಾಗ ಅತಿ ಸಂಭ್ರಮದೀ ೪

ತಿರುಮಾಲೇಶನು ತನ್ನ ಮಡದೀಯಾಯನು ಎತ್ತಿ
ಭರದಿಂದಾ ತನ್ನರಮನೆಗಾಗಿ ತೆರಳಿದಾನು ೪

ದ್ವಾರದಾ ದಡಿಯಲ್ಲಿ ನಾರೇರೆಲ್ಲರು ನಿಂತು
ವಾರಿಜಾಕ್ಷಿ ಪತಿಯ ಹೆಸರಾ ಹೇಳೆಂದರು ೪

ಕಿರುನಗೇಯಿಂದ ಲಕ್ಷ್ಮೀ ಗಿರಿಯಾ ವೆಂಕಟನೆನಲೂ
ಹರಿಯೆ ನಿನ್ನ ರಮಣಿ ಹೆಸರ ಹೇಳೆಂದರೂ ೪

ಜಾತಿ ನಾಚಿಕೆ ತೊರೆದು ಶ್ರೀ ತರುಣಿ ಎನುತಾಲೆ
ಪ್ರೀತಿಯಿಂದಲಿ ಸಿಂಹಾಸನದಿ ಕುಳಿತರಾಗಾ ೪

ಮತ್ತೆ ನಾರಿಯರೆಲ್ಲಾ ಮುತ್ತಿನಾರತಿ ಪಿಡಿದೂ
ಸತ್ಯಭಾಮೆಗೆ ಜಯ ಜಯವೆಂದರಾಗಾ ೪

ಮಂಗಳ ಮಾನಸಗೇಯಾ   ಮಂಗಳ ಮಾಧವರಾಯಾ

ಧರೆಯೊಳಧಿಕನಾದ ದೊರೆ ವ್ಯಾಸಾವಿಠಲಾನು
ಪರಮ ಭಕ್ತಿ ಸುಜ್ಞಾನವನು ಪಾಲೀಸೂವಾ

೪೧

ಶಂಕರಾಭರಣ

ಜಯ ಜಯಾ ಶ್ರೀ ವೇಂಕಟೇಶ ಜೀಯ

ಜಯ ಶ್ರೀವೇಂಕಟೇಶ ಜೀಯ– ನೀನ–
ಭಯಪ್ರದಾಯಕನಯ್ಯ– ॥ ಆಹಾ ॥
ಭಯಕೃದ್ಭಯನಾಶನ ನೀ ಎನ್ನ ಕೈ ಬಿಡದೆ
ಕಾಯೊ ಎನ್ನೊಡೆಯನೆ ವೇಂಕಟರಾಯ

ಮಂಕುಮಾನವನಾದ ಎನ್ನ ಮನದ
ಡೊಂಕುತಿದ್ದಿದಿ ಸ್ವಪನವನ್ನ – ನಿನ್ನ
ಅಂಕಿತದಂತೆ ನುಡಿಸೆನ್ನ – ಇನ್ನು
ಮಂಕು ಹರಿಸಿದೆ ಪ್ರಸನ್ನ– ॥ಆಹಾ॥
ಬಿಂಕದಿಂದ ಇಹ ಶಂಕೆ ಹರಿಸಿ ನಿನ್ನ
ಕಿಂಕರ ಕಿಂಕರ ಕಿಂಕರನೆನಿಸಿದೆ

ಹಿಂದನೇಕ ಪರಿಯಿಂದ ಮನ–
ಬಂದಂತೆ ನುಡಿಸಿದ್ದರಿಂದ – ತಂದೆ
ಮುದ್ದುಮೋಹನ ವಿಠ್ಠಲಾನಂದ – ಪೊಂದಿ
ಸಂದೇಹ ಹರಿಸಿದ ಚಂದ – ॥ ಆಹಾ ॥
ಇಂದು ಮುಂದು ಎಂದೆಂದಿಗೂ ನೀ ಭವ
ಬಂಧ ಹರಿಸಿ ಕಾಯಬೇಕು ಇಂದಿರೆರಮಣ

ತ್ವರಿತಾದಿ ದಯಮಾಡೊ ಹರಿಯೇ – ನೀನೆ

[illegible] ಶ್ರೀ ವೇಂಕಟೇಶಾಭಿನ್ನ
ಉರಗಾದ್ರಿವಾಸವಿಠ್ಠಲ ಜಗದೀಶನೆ

## ೪೧

ಶಂಕರಾಭರಣ

ಜಯಭೋ, ಜಯಭೋ, ಜಯ ವೆಂಕಟೇಶ ಪ್ರಭೋ
ಜಯ ಕರ್ತಾ, ಭಯ ಹರ್ತಾऽ ಭಯದಾಯಕ ಮೂರ್ತೆ

ಫಣಿಗಿರಿವರ ಫಣಮಂದಿರ ಪ್ರಣತ ಮನೋಹರ
ಘನಸದ್ಗುಣಗಣಪೂರ್ಣ, ಘನಶಾಮಲವರ್ಣ
ಮನಮಾನಸ ಮುನಿತಾಪಸ ಮನೋಮಾನಸ ಹಂಸ
ದನುಸುತ ಹರ, ಧೇನು ಸಂಹರ, ದಿನಮಣೀಶ ರುಚಿರ

ವನಜಾಕ್ಷಾऽವನೀಜಾಂತಕ ವನಜಾಸನಜನಕ
ಕನಕಾಕ್ಷಹ ಕನಕಾಲಯ ಕಸಕಸ್ತ್ರೀಪ್ರೀಯಾ
ವನಭ್ರಮಣಾऽವನಿರಮಣಾ ವಿನತಾತ್ಮಜ ಗಮನಾ
ಅನಿಮಿತ್ತಜ ಅನುಸೂಯಜ ಅನಿಮಿಷ ಇಂದ್ರಾನುಜಾ

ಅರಿದರಧರ, ಅರಿಪರಿಹರ, ಅರುಣಾಂಬರಧರ
ಚಿರಮಣಿ ರುಚಿರಾಭರಣನು ಚರಸುರತರು ವೀರ
ಸುರ ಪರಮಾಪ್ತನೇ ಸಾಸಿರ ಕ್ರೀಡಾಶ್ಚರ್ಯಾಗಾರಾ
ಕಲಿ ಕಲುಷಹರ ಕರುಣಾಕರ ಪ್ರಸನ್ವೆಂಕಟೇಶ್ವರ

## ೪೨

ಜೈ ಜೈ ವೆಂಕಟರಾಯ ಸಲಹು ಗಡ

ರಾಯಚೂರು ಒಡೆಯ ಮೊರೆಯ ಕಾಯೊ ಕರುಣಿ ಶುಭ
ಕಾಯು ಐಹಿಕ ಮಹಮಾಯವ ಬಿಡಿಸಯ್ಯ

ಕಿಂಕರರಘದೂರ
ಶಂಖಸುರನ ಬಲು ಬಿಂಕಮುರಿದ
ಬಲದಂಕ ಆದಟವೀರ ಶೂರ
ಅಂಕುರಿಸೆನ್ನೊಳಾತಂಕತಾರದೆ ಪೊರೆ
ಲಂಕಾ ವಿಜಯಕಾರ

ದಾತ ಮೂರುಜಗನಾಥ ಪರಮ ಅ
ಧ್ಭೂತ ಮಹಿಮೆಗಾರ ಚದುರ
ಪ್ರೀತ ಭಕುತ ಭವಭೀತರಹಿತ ಮಾಯಾ
ಪೂತನಿ ಸಂಹಾರ
ನೀತಿಕೋವಿದ ವಿಧಿತಾತ ಅಸಮ ವಿ
ಖ್ಯಾತ ಕರುಣನಿಕರ ಸುಂದರ
ಘಾತಿಸಿ ಕಂಸನ ಮಾತಾಪಿತರ ಕಾಯ್ದ
ಪಾತಕ ನಿವಾರ

ಬಾಲನಂತರಿಯದೆ ಆಲಯಗಳ ಪೊಕ್ಕು
ಪಾಲು ಮೊಸರು ಕದಿದ ಸವಿದ
ಬಾಲೆರುಡುವ ದುಕೂಲ ಕದಿದು ತಾ
ಮೇಲು ಮರವನೇರ್ದ
ಕಾಲಿಂದಿ ಧುಮುಕಿದ ಕಾಳಿಯಮೆಟ್ಟಿದ
ಕಾಳರಕ್ಕಸರೊದೆದ ಸದೆದ ಲೀಲಾ
ಜಾಲ ನಂದ ಬಾಲನಾಗಿ ಬಲು
ಬಾಲಲೀಲೆಗೈದ

ಪರಮ ಪರಾತ್ಪರ ಪರಮಪುರುಷ ಸಿರಿ
ಪರಮ ಪಂಚಪ್ರಾಣ ದುರಿತ
ಹರಣ ಜನನ ಮರಣ್ದೂರಸುರವಿನಮಿತ
ಧರಣೆಗಧಿಕ ತ್ರಾಣ
ಕರಿಧ್ರುವರಿರ್ವರನು ಭರದಿ ನೀಡಿ ನಿಂತು
ಪೊರೆದ ಪಾಂಚಾಲೀಮಾನ ಜಾಣ

ದಾಮ ಸುಜನಹೃದಯನಿಲಯ
ಕಾಮಜನಕ ಪುಣ್ಯನಾಮ ರಕ್ಕಸಕುಲ
ಭೀಮ ಪಾಲಿಸಭಯ
ಶಾಮವರ್ಣ ಮಮಸ್ವಾಮಿ ಭಜಿಪೆ ಶ್ರೀ
ರಾಮಪಿಡಿಯೋಕಯ್ಯ ಸದಯ
ಕಾಮಿತ ವರ ಸುಪ್ರೇಮದಿ ಇತ್ತೆನ್ನ
ಪ್ರೇಮದುದ್ಧರಿಸಯ್ಯ

೪೩

ಜೈ ತಿರುಪತಿ ವೆಂಕಟರಮಣ
ಕಿಂಕರಜನ ಮಹ ಸಂಕಟಹರ ಜೈ

ಶಂಖಚಕ್ರಧರ ಮಂಕುದಾನವಹರ
ಪಂಕಜಪಾಣಿಯಕಳಂಕ ಮಹಿಮ ಜೈ

ಸೃಷ್ಟಿಮೇಲೆ ಪ್ರತಿಷ್ಠನಾಗಿ ಮಹ
ಬೆಟ್ಟವೆ ಭೂವೈಕುಂಠವೆನಿಸಿದಿ ಜೈ

ತಪ್ಪದೆ ಭಕುತರಿಂ ಕಪ್ಪಗೊಳ್ಳುತ ನೀ
ಅಪ್ಪಿಕೊಂಡರಿವೀವಿ ಅಪ್ಪ ತಿಮ್ಮಪ್ಪ ಜೈ

ಕೋಟಿ ಕೋಟಿ ಮಹತ್ವಸಾಟಿಗಾಣದೆ ತೋರಿ
ಆಟವಾಡುವಿ ಜಗನಾಟಗಾರನೆ ಜೈ

ಕಪ್ಪು ವರ್ಣದಿಂದೊಪ್ಪುವಿ ಸಿರಿಯಿಂ
ದಪ್ಪಿಕೋ ದಯದೆನ್ನಪ್ಪ ಮುರಾರಿ ಜೈ

ಬೇಡಿದ ವರಗಳ ನೀಡಿದೆ ದಯದಿ ಹರಿ
ಗಾಢಮಹಿಮೆ ಇಹ್ಯನಾಡಿಗರುಹಿದಿ ಜೈ

ಕೋರಿದವರ ಮನಸಾರ ವರವನೀಡಿ
ಧಾರುಣಿಯೊಳಿದ್ವಪಾರ ಮಹಿಮೆ ಜೈ

ಮುಕ್ತಿ ಸಂಪದ ದೇ ಕರ್ತು ಶ್ರೀರಾಮ ಜೈ

೪೪

ಬ್ಯಾಗಡೆ

ತಪ್ಪುಗಳೆಲ್ಲ ನೀನೊಪ್ಪಿಕೊಳ್ಳೊ ನ
ಮ್ಮಪ್ಪ ಕಾಯಬೇಕು ತಿಮ್ಮಪ್ಪ ನೀನೆ

ಸತಿಸುತರಿಗೆ ಸಂಸಾರ ಬಲೆಗೆ ಅತಿ
ಮತಿಹೀನನಾಗಿ ಸಿಕ್ಕೆ ಆಸೆಗಳಿಗೆ
ಮಿತಿಗಾಣೆನಯ್ಯ ಎನ್ನ ಪಾಪಗಳಿಗೆ ಮುಂದೆ
ಗತಿ ಯಾವುದಯ್ಯ ಶ್ರೀಪತಿ ಎನಗೆ

ಬಿಸಿಲು ಮಳೆ ಬಿರುಗಾಳಿಯೊಳು ಬಲು
ದೆಸೆಗೆಟ್ಟು ತಿರುಗಿ ದೇಶ ದೇಶಗಳು
ಹಸಿವು ತೃಷೆಗಳು ಬಹು ಬಾಧಿಸಲು ಬಹು
ಹುಸಿಯನಾಡಿದೆನಯ್ಯ ಹುಟ್ಟು ಮೊದಲು

ಸ್ನಾನ ಸಂಧ್ಯಾನವನೊಂದನರಿಯೆ ಅನ್ನ
ಪಾನಗಳನು ನಾನೊಮ್ಮೆ ಮರೆಯೆ
ಹೀನರ ಸಂಗ ಎಂದೆಂದು ತೊರೆಯೆ ಸು
ಜ್ಞಾನಿಗಳನಿತ್ತ ಬಾ ಎಂದು ಕರೆಯೆ

ಜಪತಪದಲ್ಲಿ ರೀತಿ ಭಾಷೆಯಿಲ್ಲ ಎ
ನ್ನಪರಾಧಗಳಿಗಿನ್ನು ಎಣಿಕೆಯಿಲ್ಲ
ಚಪಲತನದಿ ಕಾಲ ಕಳೆದೆನಲ್ಲ ಸ್ವಾಮಿ
ಕಪಟನಾಟಕ ನೀನೆ ಬಲ್ಲೆಯಲ್ಲ

ಗಂಗೆ ಅಗ್ರೋದಕಗಳ ತಂದು ಸ್ನಾ

ನೊಂದು ದೂರಾದೆ ಸದ್ಗತಿಯಿಂದ

ಪೀತಾಂಬರಾದಿ ವಸ್ತ್ರಗಳಿಂದ ದಿವ್ಯ
ನೂತನವಾದ ಆಭರಣದಿಂದ
ಪ್ರೀತಿಪಡಿಸಲಿಲ್ಲಾದ್ದರಿಂದ ಹೇ
ಸೀತಾಪತೇ ಕೃಷ್ಣ ಹರಿ ಮುಕುಂದ

ಧೂಪಾರತಿಯ ನಾ ಮಾಡಲಿಲ್ಲ ಒಂದು
ದೀಪವನಾದರು ಹಚ್ಚಲಿಲ್ಲ
ಈ ಪರಿ ಕಳೆಯಿತೀ ಜನ್ಮವೆಲ್ಲ ದೇವ
ಆಪದ್ಬಾಂಧವ ಕಾಯೊ ಲಕ್ಷ್ಮೀ ನಲ್ಲ

ಸೋಪಸ್ಕರವನು ಒಂದು ಮಾಡದೆ ಎಲ್ಲ
ಗೋಪಾಲಕೃಷ್ಣಗೆ ಅರ್ಪಿಸದೆ
ಪಾಪಕಾರ್ಯಕ್ಕೆ ನಾ ಗುರಿಯಾದೆ ಸ್ವಾಮಿ
ಶ್ರೀಪತಿ ಕಾಯೊ ಎನ್ನ ಕೈಯ ಬಿಡದೆ

ಪಾಯಸ ಪಂಚ ಭಕ್ಷ್ಯಗಳಿಂದ ಬಲು
ಆಯತವಾದ ಶಾಕಗಳಿಂದ
ತೋಯ ಶಾಲ್ಯಾನ್ನ ಗೋಘೃತದಿಂದ ಕೃಷ್ಣ
ರಾಯನನರ್ಚಿಸಲಿಲ್ಲ ಭಕ್ತಿಯಿಂದ

ಮಂಗಳಾರತಿಯನು ಮಾಡಲಿಲ್ಲ ಜಯ
ಮಂಗಳವೆಂದು ನಾ ಪಾಡಲಿಲ್ಲ
ಕಂಗಳಿಂದಲಿ ನಿನ್ನ ನೋಡಲಿಲ್ಲ ಮುದ್ದು
ರಂಗನೆ ಬಾ ಎಂದು ಬೇಡಲಿಲ್ಲ

ಹರಿಯ ಪ್ರದಕ್ಷಿಣೆ ಮಾಡಲಿಲ್ಲ ನರ

ಅತಿಥಿಗಳೆಂದು ಬಂದರೆ ಮನೆಗೆ ನಾ
ಗತಿಯಿಲ್ಲ ಕೂಡದು ಎಂದೆ
ಯತಿಗಳ ಕೂಡ ನಿಂದಿಸಿದೆ ಕೊನೆಗೆ ಶ್ರೀ
ಪತಿ ದೃಷ್ಟಿಯಿಡು ಈ ಪಾಪಿ ಕಡೆಗೆ ೧[illegible]

ಹೋಮಾರ್ಚನೆ ಔಪಾಸನೆಯೆಲ್ಲ ಎಂದೂ
ನೇಮದಿಂದಲಿ ನಾ ಮಾಡಲಿಲ್ಲ
ಕಾಮಾತುರದಿ ಕಂಡ ಕಂಡಲ್ಲೆಲ್ಲ ರಾಮ
ಭ್ರಾಮಕನಾಗಿ ತಿರುಗಿದೆನಲ್ಲ ೧[illegible]

ಎಷ್ಟು ಹೇಳಲಿ ಅವಗುಣಗಳೆಲ್ಲ ಅವು
ಅಷ್ಟು ಇಷ್ಟು ಎಂದು ಎಣಿಕೆಯಿಲ್ಲ
ದೃಷ್ಟಿಯಿಂದಲಿ ನೋಡ್ಡೋ ದೀನವತ್ಸಲ ಸರ್ವ
ಸೃಷ್ಟಿಗೊಡೆಯ ಪುರಂದರವಿಠಲ ೧[illegible]

## ೪೫

ನಾಟ ಧ್ರು[illegible]

ತಿಮ್ಮಯ್ಯಾ ನಿನ್ನ ಪಾದವ ನಮ್ಮೈಸಿದೆನೊ ನಾನು
ಸುಮ್ಮನಿರದಿರು ರಮ್ಮೆಯರಸಾ
ನಮ್ಮದು ಎಂದೆಂದು ಈ ಮನದಲಿ ಬಲು
ಹಮ್ಮಲಿ ತಿರಿಗಿದೆ ಹಿಮ್ಮಟ್ಟದೆ
ಹೆಮ್ಮನೆ ಹಿತ್ತಲಿ ಹೆಮ್ಮಕ್ಕಳ ಹೊನ್ನು
ಹಮ್ಮೆಣಿವುಳ ಸಂಭ್ರಮದಲ್ಲಿ
ಒಮ್ಮ್ಯಾದರೂ ನಿನ್ನ ನೆಮ್ಮದೆ ಆವಾಗ
ವಿಮ್ಮಡಿ ದುಷ್ಕರ್ಮ ರಮ್ಮಿಸಿದೆ
ಉಮ್ಮಡಿಕೆಯಿಂದ ಹಮ್ಮತಿಯೊಳಗಿದ್ದು
ಗಿಮ್ಮನೆ ಸುತ್ತಿದೆ ಮಮ್ಮಾಡಿಯಲಿ
[illegible] ವಿಜಯವಿಠಲ

## ಮಟ್ಟ

ನಿನ್ನ ಚರಣ ಮೋಹನ್ನ ಚರಣ ನಿನ್ನ ಚರಣ ಸಂಪನ್ನ ಚರಣ
ನಿನ್ನ ಚರಣ ಒಲುವಂತಚರಣ ನಿನ್ನ ಚರಣ ಪ್ರಸನ್ನ ಚರಣ
ನಿನ್ನ ಚರಣ ರತುನ್ನ ಚರಣ ನಿನ್ನ ಚರಣ ಪಾವನ್ನ ಚರಣ
ವನ್ನು ಧ್ಯಾನಿಸಲು ಎನ್ನಘಪಾಶ ಕಣ್ಣಿನ ಕುಣಿಕೆ
ತನ್ನಿಂದಲಿ ತಾನೆ ಭಿನ್ನವಾಗುವದು
ಅನಂತರೂಪ ವಿಜಯವಿಠಲ
ಕಣ್ಣಿಗೆ ತೋರೊ ನಿನ್ನ ಚರಣ

## ತ್ರಿವಿಡಿ

ಜಗದೊಳಗುಳ್ಳ ನದಿಗಳು ಕ್ಷೇತ್ರಂಗಳು
ಗಗನ ನಾಗಲೋಕದಲ್ಲಿದ್ದವೊ
ಅಗಣಿತಮಹಿಮ ನಿನ್ನುಗರಾಶ್ರಯವ ತೊ
ಲಗದೆ ಮಾಡಿಕೊಂಡಿಪ್ಪದೆಂದು
ನಿಗಮತತಿಗಳು ಪೊಗಳುತಲಿವೆ ಹಿಂ
ದೆಗಿಯದೆ ಮನಬಲು ಉಬ್ಬಿನಲ್ಲಿ
ಭಾಗಘ್ನನಾಮ ಸಿರಿ ವಿಜಯವಿಠಲ ನಾನು
ಮಿಗಿಲಾವದು ಕಾಣೆ ನಿನ್ನ ಪಾದವಲ್ಲದೆ

## ಅಟ್ಟ

ಮೂರುವರೆ ಕೋಟಿ ತೀರಥದಲ್ಲಿ ಪೋಗೆ
ವಾರವಾರ ಒಂದೆಸಾರಿಗೆಯಲಿ ಮುನ್ನಾರು ಕಲ್ಪದಲ್ಲಿ
ಮೀರದೆ ಸ್ನಾನಾದಿ ಪೂರೈಸಿ ಮಾಡಲು
ಧಾರುಣಿ ಸುರನಾಗಿ ನಾರಾಯಣನ ಶೃಂ
ಗಾರದ ಪಾದವ ಧಾರಣೆಯಿಂದಲಿ ಸಾರಿದ ಮಾತುರ
(ತೀರಿಥಗಳಿಗೀಗ) ಪಾರ ಫಲವುಂಟು
[illegible]

ಅಚ್ಯುತ ನಿನ್ನ ಚರಣ ನಿಚ್ಚಬಿಡದೆ ಸ್ಮರಣೆ ಮಾಡೆ
ಬೆಚ್ಚಿಸಿದ್ದ ಪಾಪಗಳು ಕೊಚ್ಚಿ ಹರಿದುಪೋಗುವವು
ಅಚ್ಚಗತಿಗೆ ನೆನೆದಾಗ ನಿಚ್ಚಣಿಕೆ ಎನಿಸುವದು
ಅಚ್ಯುತ ಅಚ್ಯುತ ನಿನ್ನ ನೆಚ್ಚದಾಗದೆ ಬರಿದೆ ಪೋಪೆ
ಅಚ್ಚದೈವ ವಿಜಯವಿಠಲ ಬಚ್ಚಲಗಲ್ಲನು ಮಾಡಿ
ಮೆಚ್ಚಿನಿಂದ ನಿನ್ನ ನಿತ್ಯಮೆಚ್ಚಿ ಭಜಿಸುವಂತೆ ನೋಡೊ

ಜತೆ

ತೀರ್ಥಾದಿಗಳು ನಿನ್ನ ಪಾದದಲ್ಲಿ ಉಂಟಯ್ಯಾ
ಅರ್ಥಾ ವಿಜಯವಿಠಲ ನಿನ್ನ ಚರಣ ಬಿಡೆನಯ್ಯಾ

೪೭

ಖರಹರಪ್ರಿಯ

ತಿರುಪತಿ ವೆಂಕಟರಮಣ, ನಿನಗೇತಕೆ ಬಾರದು ಕರುಣ

ನಂಬಿದೆ ನಿನ್ನಯ ಚರಣ, ಪರಿಪಾಲಿಸಬೇಕೊ ಕರುಣ

ಅಳಗಿರಿಯಿಂದಲಿ ಬಂದಾ ಸ್ವಾಮಿ
ಅಂಜನಗಿರಿಯಲಿ ನಿಂದ
ಕೊಳಲೂದೊ ಧ್ವನಿ ಚಂದಾ ನಮ್ಮ
ಕುಂಡಲರಾಯ ಮುಕುಂದ

ಬೇಟೆಯಾಡುತ ಬಂದಾ ಸ್ವಾಮಿ
ಬೆಟ್ಟದ ಮೇಲೆ ನಿಂದಾ
ನೀಟುಗಾರ ಗೋವಿಂದಾ ಅಲ್ಲಿ
ಜೇನು ಸಕ್ಕರೆಯನು ತಿಂದಾ

ಮೂಡಲಗಿರಿಯಲಿ ನಿಂತ ಮುದ್ದು

[illegible] ಸ್ಥಿರವಪ್ಪ ಶ್ರೀ
ಬದ್ಧಗಳಾಡಲು ಒಪ್ಪ
ಬೇಡಿದ ವರಗಳನಿಪ್ಪ ನಮ್ಮ
ಮೂಡಲಗಿರಿ ತಿಮ್ಮಪ್ಪ

ಅಪ್ಪವು ಅತಿರಸ ಮೆದ್ದ ಸ್ವಾಮಿ
ಅಸುರರ ಕಾಲಲಿ ಒದ್ದ
ಸತಿಯರ ಕೂಡಾಡುತಲಿದ್ದ ಸ್ವಾಮಿ
ಸಕಲ ದುರ್ಜನರನು ಗೆದ್ದ

ಬಗೆಬಗೆ ಭಕ್ಷ್ಯ ಪರಮಾನ್ನ ನಾನಾ
ಬಗೆಯ ಸಕಲ ಶಾಲ್ಯಾನ್ನ
ಬಗೆಬಗೆ ಸೊಬಗು ಮೋಹನ್ನ ನಮ್ಮ
ನಗೆಮುಖದ ಪ್ರಸನ್ನ

ಕಾಶೀ ರಾಮೇಶ್ವರದಿಂದ ಅಲ್ಲಿ
ಕಾಣಿಕೆ ಬರುವುದೆ ಚಂದ
ದಾಸರ ಕೂಡೆ ಗೋವಿಂದ ಅಲ್ಲಿ
ದಾರಿ ನಡೆವುದೇ ಚೆಂದ

ಎಲ್ಲ ದೇವರ ಗಂಡ ಅವ
ಚಿಲ್ಲರೆ ದೈವರ ಮಿಂಡ
ಬಲ್ಲಿದರಿಗೆ ಉದ್ದಂಡ ಶಿವನ
ಬಿಲ್ಲ ಮುರಿದ ಪ್ರಚಂಡ

ಕಾಸು ತಪ್ಪಿದರೆ ಪಟ್ಟಿ ಬಡ್ಡಿ
ಕಾಸುಬಿಡದೆ ಗಂಟು ಕಟ್ಟಿ
ದಾಸನೆಂದರೆ ಬಿಡ ಗಟ್ಟಿ ನಮ್ಮ
ಕೇಸಕ್ಕಿ ತಿಮ್ಮಪ್ಪ ಸೆಟ್ಟಿ

ದಾಸರ ಕಂಡರೆ ಪ್ರಾಣ ತಾ

ಮೋಸ ಹೋಗುವನಲ್ಲಯ್ಯ ಒಂದು
ಕಾಸಿಗೆ ಒಡ್ಡುವ ಕೈಯ
ಏಸು ಮಹಿಮಗಾರನಯ್ಯ ನಮ್ಮ
ವಾಸುದೇವ ತಿಮ್ಮಯ್ಯ

ಚಿತ್ತವಧಾನ ಪರಾಕು ನಿನ್ನ
ಚಿತ್ತದ ದಯವೊಂದೆ ಸಾಕು
ಸತ್ಯವಾಹಿನಿ ನಿನ್ನ ವಾಕು
ನೀನು ಸಕಲ ಜನರಿಗೆ ಬೇಕು

ಅಲ್ಲಲ್ಲಿ ಪರಿಷೆಯ ಗುಂಪು ಮ
ತ್ತಲ್ಲಲ್ಲಿ ತೋಪಿನ ತಂಪು
ಅಲ್ಲಲ್ಲಿ ಸೊಗಸಿನ ಸೊಂಪು ಮ
ತ್ತಲ್ಲಲ್ಲಿ ಪರಿಮಳದಿಂಪು

ಅಲ್ಲಲ್ಲಿ ಜನಗಳ ಕೂಟ ಮ
ತ್ತಲ್ಲಲ್ಲಿ ಬ್ರಾಹ್ಮಣರೂಟ
ಅಲ್ಲಲ್ಲಿ ಪಿಡಿದ ಕೋಲಾಟ ಮ
ತ್ತಲ್ಲಿಂದ ಊರಿಗೆ ಓಟ

ಪಾಪ ವಿನಾಶಿನಿ ಸ್ನಾನ ಹರಿ
ಪಾದೋದಕವೇ ಪಾನ
ಕೋಪತಾಪಗಳ ನಿಧಾನ ನಮ್ಮ
ಪುರಂದರವಿಠಲನ ಧ್ಯಾನ

೪೭

ಸಾವೇರಿ

ದಣಿಯ ನೋಡಿದೆನೋ ವೆಂಕಟನ, ಮನ

ದಾಸರ ಮೇಳದಿ ಕುಣಿದಾಡುತಿಹನ

ಗಂಟಿನೊಲ್ಲಿಯ ಪೊದ್ದಿಹನ, ಹೊರ
ಹೊಂಟು ಹೋಗಿ ಬೇಟೆಯಾಡುತಲಿಹನ
ಘಂಟೆ ನಾದಕೆ ಒಲಿಯುವನ, ಭೂ ವೈ
ಕುಂಠವಿದೆಂದು ಹಸ್ತವ ತೋರಿದವನ

ಬೆಟ್ಟದೊಳಗೆ ಇರುತಿಹನ, ಮನ
ಮುಟ್ಟಿ ಭಜಿಪ ಭಕುತರಿಗೊಲಿದವನ
ಕೊಟ್ಟ ವರವ ತಪ್ಪದವನ, ಈ
ಸೃಷ್ಟಿಗಧಿಕ ಪುರಂದರವಿಠಲನ

## ೪೮

**ತೋಡಿ**

ದಾಸ ಶೇಷಾದ್ರಿವಾಸ ತಿಮ್ಮಪ್ಪನ
ದಾಸರನ ಕರೆದೊಯ್ದು
ಸಾಸಿರನಾಮ ವಿಲಾಸಮೂರ್ತಿಯ
ಲೇಸಾಗಿ ತೋರೆನಗೆ

ಬೆರಳು ಇಲ್ಲದ ಕೈಯೊಳುಂಡು ಜೀವಿಸುವನ
ಶಿರದಲಂದದ ದೇವನ
ಉರುವ ಶಾಪಕೆ ತಾನು ಕಿರಿದಾಗಿ ಇರುವನ
ಶಿರದೊಳು ಧರಿಸಿದವನ
ಕೊರಳ ಮಾಲೆಯ ಪೆಸರೊಪ್ಪಿದ ಗಿರಿಯೊಳು
ಸ್ಥಿರವಾಗಿ ನೆಲಸಿಪ್ಪನ
ಕರುಣವಾರಿಧಿ ವೆಂಕಟೇಶನ ಚರಣವ
ಕರೆದೊಯ್ದು ತೋರೆನಗೆ

ಮೂರೊಂದು ಪೆಸರವನ
ಮೇರುವಿನಗ್ರದಿ ಊರಿದ ಚರಣವ
ಸಾರಿದವರ ಜೀವನ
ಊರಿಗೆ ಕರೆದೊಯ್ದು ಶ್ರೀ ವೆಂಕಟೇಶ ಪ
ದಾರವಿಂದವ ತೋರೆನಗೆ

ಸೋತ ಮಾನಿನಿಯೊಳು ಜಾತವಾಗಿಯೆ ಮೇಲೆ
ಮಾತೆಯ ಸಲಹಿದವನ
ನೀತಿ ತಪ್ಪಿಯೆ ನಡೆ ವಾತಭಕ್ಷಕರನ್ನು
ಘಾತಿಸಿ ತರಿದವನ
ನೂತನವಾಗಿಹ ನಾಮ ಶೈಲದ ಮೇಲೆ
ಕಾತರದೊಳು ನಿಂತನ
ಪಾತಕನಾಶನ ಶ್ರೀ ವೇಂಕಟೇಶನ
ರೀತಿಯ ತೋರೆನಗೆ

ಋಷಿಯ ಮಕ್ಕಳಿಗೆಲ್ಲ ಹಸಿವಿಗೆ ಗುರಿಯಾಗಿ
ವಶತಪ್ಪಿ ನಡೆದವಳ
ಬಸಿರೊಳಗುದಿಸಿಯೆ ಬಿಸಿಯನೆಲ್ಲವ ತಿಂದು
ಎಸೆವಂಥ ಮಹವೀರನ
ಪೆಸರೊಳಗೊಪ್ಪಿದ ಹಸನಾದ ಗಿರಿಯೊಳು
ಕುಶಲದಿ ನಿಂತವನ
ನಸುಮುದ್ದು ಶ್ರೀ ವೇಂಕಟೇಶನ ಚರಣದ
ಬಿಸರುಹ ತೋರೆನಗೆ

ಪಾದ ನಾಲ್ಕನು ಮೇದಿನಿಯೊಳಗೂರಿಯೆ
ಆದರಿಸುತ ಬಪ್ಪ ಮೇ
ಲಾದ ಪಾದವ ನಾಲ್ಕು ಅಂತರಿಕ್ಷದ ಮೇಲೆ
ಕಾದುಕೊಳ್ಳುತಲಿಪ್ಪನ
ಆದಿಯ ನಾಮಕ್ಕೆ ಅದ್ರಿಯನೊಡಗೊಂಡು

ಭೇದಿಸಿ ನಿಂತವನ
ಸಾಧಿಸಿ ಮುಂದಣ ವೇಂಕಟಾದ್ರಿಯ ಮೇಲೆ
ಪಾದವನೂರಿದನ
ಮೇದಿನಿಯೊಳಗುಳ್ಳ ಸಾಧು ಭಕ್ತರನೆಲ್ಲ
ಕಾದುಕೊಳುತಲಿಪ್ಪ ವಿ
ನೋದ ಮೂರುತಿಯಾದ ಶ್ರೀ ವೇಂಕಟೇಶನ
ಪಾದವ ತೋರೆನಗೆ

ಅತ್ತೆಯ ವರಸೆಯ ಮತ್ತೆ ಅಳಿಯಗಾದ
ಪುತ್ರಿಯ ತಂದವನ
ಉತ್ತಮವಾಗಿಹ ಮಗಳ ಸನ್ನಿಧಿಯಲ್ಲಿ
ನಿತ್ಯದೊಳಿರುತಿಪ್ಪನ
ಬತ್ತಲೆಯಾಗಿಹ ಸತಿಯಳ ಸತ್ಯಕ್ಕೆ
ಪುತ್ರನೆಂದೆನಿಸಿದನ
ಹತ್ತಿರ ಕರೆದೊಯ್ಯು ಪುರಂದರವಿಠಲನ
ನಿತ್ಯದಿ ತೋರೆನಗೆ

೪೯

ಬಹರಿ

ದೇವ ದೇವೇಶ ವೆಂಕಟೇಶ
ಶ್ರೀ ವಿಧಾತಾ ವಂದ್ಯ ಭೂವೈಕುಂಠೇಶ

ಕಾಮಿತ ಫಲದಾತ ಜನದಾಧ್ಯಕ್ಷ
ಸಾಮಗಾನ ಪ್ರೀಯ ಸುರ ಸತ್ಪಕ್ಷಾ
ಶ್ರೀಮಾವಧೂಮನೋಹರ ತ್ರಿಧಾಮ ಶ್ರೀ
ರಾಮ ಸಂಪ್ರೇಮಾಬ್ಧಿ ಕೋಮಲ ಕುಕ್ಷಾ

ಶ್ರೀಕಾರಾ ಸಾಕಾರಾ ಲೋಕೇಕ ಪೂಜ್ಯಾ

ಅನಂತಾ ಗುಣಪರಿಪೂರ್ಣ, ಸ್ವಾಮಿ
ಆನತ ಜನ ಬುಧಾಭರಣ
ಧೇನೂ ಗಿರಿನಾಥ ದಾನಿ ಪ್ರಸನ್ವೆಂಕಟ
ಜ್ಞಾನಾನಂದ ನಿತ್ಯಾ ತೇ ನಮೋ ಕರುಣೆ

## ೫೦

### ಧನಶ್ರೀ

ದೇವ ಬಾರೊ ಶ್ರೀನಿವಾಸ ದೇವನೆ ಬಾರೋ ನನ್ನ –
ದಾವ ದಾವ ಪರಿ ತಪ್ಪಕಾವನೆ ಬಾರೋ

ಜೀವನ ಪಾವನವ ಮಾಡುವನೆ ಬಾರೋ ನನ್ನ –
ಭವದ ಬಯಕೆ ಪೂರೈಸುವನೆ ಬಾರೋ

ಧ್ಯಾನಿಸಲೊಮ್ಮೆ ರ ದಯದಿ ನೀ ನಿಲ್ಲಿಬಾರೋ ಅ –
ಜ್ಞಾನ ನಾಶನ ಮಾಡುವ ಕೃಪಾನಿಧಿ ಬಾರೋ

ಹಡೆದ  ತಾಯಿ ತಂದೆ ಗುರು ಒಡೆಯನೆ ಬಾರೋ ಎನ್ನ –
ನುಡಿ ನುಡಿ ವಿಷಮೆನ್ನದೆ ಕೈವಿಡಿಯಲಿ ಬಾರೋ

ತೆರ ತೆರ ಬಪ್ಪಾಶೆಯ ಚರಿಸಲಿ ಬಾರೋ ಆ –
ತುರದ ಕಾಮಾದ್ಯರ ನೀನೂರಸಲಿ ಬಾರೋ

ಪುಲ್ಲನುದಾಶಿಸುವುದುಚಿತಲ್ಲ ಬಾರೊ ಪ್ರಾಣ –
ದೊಲ್ಲಭ ಜಿರಿದು ನಿನ್ನದಲ್ಲೇನೋ ಬಾರೊ

ಪಾಪಗಳು ಘನ್ನವಾದರೇನಯ್ಯ ಬಾರೋ ಕೃ –
ಪಾಪಾಂಗದಲಿವು ಉಳಿಯುಪಾಪವ ಬಾರೋ

ಶಂಕರಾಭರಣ

ಧ್ವಜದ ತಿಮ್ಮಪ್ಪ ಪಲ್ಲಕ್ಕಿಯೇರಿ ತನ್ನಯ
ನಿಜಗಿರಿ ಯಾತ್ರೆಗೈದಿದ ಹರುಷವ ಕೇಳಿ

ಬಲದಲಭುಜ ಭವ ಭವಾದಿಗಳೆಡದಲಿ
ಉಳಿವ ವೇದ – ಉಪನಿಷದುಗಳು
ಸಲುಗೆಯಲಿ ಸನಕಾದಿಗಳು ಸೇವಿಸೆ ಮುನ್ನ
ಹಲವು ಋಷಿ–ಮುನಿನಿಕರ ಹಿಂದೆ ಬರುತಿರಲು

ಛತ್ರವ ಶಚಿ ಚಾಮರವ ಧಾಳಿಸೆ ಇಂದ್ರ
ಚಿತ್ತಜಾತನು ವ್ಯಜನವ ಬೀಸಲು
ಹೊತ್ತು ಮಾರುತಿ ಹಡಪ ಹೊಳೆವೆಲೆಗಳ ಕೊಡಲು
ಹಸ್ತದ ಕಾಳಂಜಿ ಹರಿಣಾಂಕನು ಬರೆ

ವರುಣನು ಸ್ವಾದು ಜಲವ ಪಿಡಿದು ಬರೆ
ತರುಣಿ ತನಗೆ ಆಧಾರದಂತಿರಲು
ಸುರರು ಸುಮನಗಳಿಂದ ಸರ್ವರೂ ತಮ್ಮ ತಮ್ಮ
ಪರಿಪರಿ ಆಯುಧಗೊಂಡು ಬಳಸಿಬರೆ

ಮಂದರ ಮಧ್ಯಮ ತಾರಕ ಮೋಹನ –
ದಿಂದ ಗಂಧರ್ವರು ಗಾನ ಮಾಡೆ
ತೋಂ ಧಿಮಿ ಧಿಮಿಕೆಂದು ತಾಳ ಮೇಳದಿ ನಾ –
ರಂದಪಾಡಲು ಆಡುತಾಡುತ ಬರುತಿರೆ

ಲೋಕನಾಯಕ ಲೋಕೈಕ ರಕ್ಷಾಮಣಿ
ಸಾಕಾರರೂಪ ಸದ್ಗುಣಭರಿತ
ವೆಂಕಟೇಶ ವ್ಯಾಸಮುನಿ ವರದನಾದ ಕರು –
ಣಾಕರ ಪುರಂದರವಿಠಲನು ಗರುಡ

೫೨

ಪಂತುವರಾಳಿ

ಸಂಕಟವೆಲ್ಲವ ಪರಿಹರಿಸು
ವೆಂಕಟೇಶಾ ಧೊರೆ ಧೊರೆ

ಎತ್ತಿನ ಪೆಸರುಳ್ಳ ಮತ್ತೆ ರಕ್ಕಸ ತನ್ನ
ಕುತ್ತಿಗೆ ತೆಗೆದಿಡಲುತ್ತಮ ಗತಿಯಿತ್ತೆ

ಅಂಜನೆ ಎಂಬುವಳ್ಕಂಜು ಬಿಸಲಿಗೆ
ಅಂಜದೆ ತಪಿಸಲು ಸಂಜೀವನ ಕೊಟ್ಟ

ಸಾಸಿರ ಮುಖವುಳ್ಳ ಶೇಷನಹಂಕಾರ
ಶ್ವಸನನ ಕೈಯಿಂದ ನಾಶ ಮಾಡಿಸಿದಂಥ

ಮಾಧವ ಮಾದಿಗ ಹಾದಿಯ ಮೆಟ್ಟಲು
ಮೋದದ್ಯುದ್ಧರಿಸಿದ ಮಾಧವ ಸಲಹೆನ್ನ

ಮೇರು ಗಿರಿಯ ಮಗನೀರೆರಡ್ಯುಗದಲಿ
ಮೂರೊಂದಭಿಧ ಬೀರಿದ ಶ್ರೀನಿಧಿ ವಿಠಲ

೫೨

## ನವರೋಜು

ನಂಬಿದೆ ನಿನ್ನ ಪಾದವ
ವೆಂಕಟರಮಣ ನಂಬಿದೆ ನಿನ್ನ ಪಾದವ

ನಂಬಿದೆ ನಿನ್ನ ಪಾದಾಂಬುಜಯುಗಳವ
ಚಂದದಿ ಸಲಹೋ ಮಂದರಧರನೆ

ತಂದೆಯು ನೀನೆ, ತಾಯಿಯು ನೀನೆ
ಬಂಧುವು ಬಳಗವು ನೀನೆ
ಬಂದ ದುರಿತವೆಲ್ಲ ಹೊಂದಿಕೊಳ್ಳದಂತೆ
ಬಂದೆನ್ನ ಸಲಹೊ ಮುಕುಂದ ಮುರಾರಿ

ಚಿಕ್ಕಂದು ಮೊದಲು ನಾನು ನಿನ್ನಯ ಪಾದ

ಮರಿತು ನಾ ಮಾಯದೊಳು, ಮುಳುಗಿದ ಮಾಯ
ವರಿತು ಅರಿಯದಾದೆ
ಮರೆಯದೆ ಎನ್ನನು ಸಲಹೊ ಕೃಪಾನಿಧಿ
ವರದ ಶ್ರೀ ವೇಂಕಟ ಪುರಂದರವಿಠ್ಠಲ

## ೫೪

ಸಾವೇರಿ

ನಡೆದು ಬಾರಯ್ಯ ನೀನು ವೆಂಕಟರಾಯ

ನಡೆದು ಬಾರಯ್ಯ ಭವಕಡಲಿಗೆ ಕುಂಭಸಂಭವ
ಸಡಗರದಿಂದ ನೀ ಮೆಲ್ಲಡಿಯನಿಡುತ ಬೇಗ
ಎಡಬಲದಲಿ ನಿನ್ನ ಮಡದೇರಿಂದೊಪ್ಪುತ
ತಡಮಾಡದೆ ಬಾ ಮೃಡಸಖ ವೆಂಕಟ

ವಿಜಯದಶಮಿ ಆಶ್ವೀಜಮಾಸ ಶುದ್ಧದಲಿ
ನಿಜರಥರೂಢನಾಗಿ ಸುಜನರಿಂದೊಡಗೂಡಿ
ಗಜ ಹಂಸ ಮಯೂರ ದ್ವಿಜ ಸಿಂಗ ಸಾರಂಗ
ಮಜ ಭಾಪುರೆ ಎನಲು ತ್ರಿಜಗವು ತಲೆದೂಗೆ
ಅಜನು ಸ್ತುತಿಯ ಮಾಡೆ ಋಜುಗಣಾಧಿಪ ಪಾಡೆ
ಗಜಮುಖನಯ್ಯನು ನಿಜಾನಂದದಲಾಡೆ
ಭುಜಗಶ್ರೇಷ್ಠನು ದ್ವಿಜರಾಜ ಜಯವೆನ್ನೆ
ಕುಜನರೆದೆಯ ಮೆಟ್ಟಿ ರಜತಮ ಕಳೆಯುತ

ದಕ್ಷಿಣದಿಕ್ಕಿನಲ್ಲಿ ರಾಕ್ಷಸ ಸಮೂಹ ಒಂ-
ದಕ್ಷೋಹಿಣಿ ಬಲ ನಿನ್ನುಪೇಕ್ಷೆ ಮಾಡುತಲಿರೆ
ಪಕ್ಷಿವಾಹನ ದೇವ ನೀನಾಕ್ಷಣದಿ ಖಳರ
ಶಿಕ್ಷಿಸಿ ಸುಜನರ ರಕ್ಷಿಸಿ ಮೆರೆದೆ
ತಕ್ಷಕ ನರನ ಭಕ್ಷಿಸಬರುತಿರೆ ಈಕ್ಷಿಸಿ ರಥವ
ತಕ್ಷಣ ನೆಲಕೊತ್ತಿದೆ ಲಕ್ಷ್ಮೀಶನೆ ಅಕ್ಷಯಫಲದಾಯಕ

ಯಾಂಬುಜನಿವಾಸ ಅಂಬುಜಮಿತ್ರ ಅನಂತಾನಂತತೇಜ
ಕೊಂಬು ಕಹಳೆಗಳು ಭೋಂಭೋರಿಡುತಿರೆ
ತುಂಬುರನಾರದರಿಂಬಾಗಿ ಪಾಡಲು
ಅಂಬರದಲಿ ವಾದ್ಯ ಧಂಧಣರೆನೆ
ಸಂಭ್ರಮದಲಿರೊ ಶಂಭುವಂದಿತನೆ

ಮನಕೆ ಬಾರಯ್ಯ ಸುಧಾಮನ ಸಖ ಹರಿಯೆ ಸೋ –
ಮನ ಧರಿಸಿದವನ ಮನ ಕುಮುದಕೆ ಚಂದ್ರ –
ಮನೆ ಕೇಳೊ ಎನ್ನ ದುಮ್ಮಾನ ಪರಿಹರಿಸೋ ಒ –
ಮ್ಮನ ಕೊಡು ಅಹಿಗಿರಿ ತಿಮ್ಮನೆ ಕೇಳೆನ್ನ ಬಿನ್ನಪವ
ಮನ ನಿನ್ನದು ಹೇ ಮನಸಿಜಪಿತ ಸುಮನಸರೊಡೆಯ ಬೊ –
ಮ್ಮನ ಪೆತ್ತವನೆ ಸುಮ್ಮನೆ ತಡವ್ಯಾಕೊ ನಿ –
ಮ್ಮನೆಯವರೊಡನೆ ಇಮ್ಮನಮಾಡದೆ ಗಮ್ಮನೆ ಬಾ ವೆಂಕಟ

ಪರಿಪರಿಯಿಂದಲಿ ಕರವ ಮುಗಿದು ಸ್ತುತಿಸಿ
ಕರೆದರೆ ಬಾರದ ಗರ್ವತನವು ಯಾಕೊ
ಕರಿಯ ಮೊರೆಯ ಕೇಳಿ ಸಿರಿಗೆ ಹೇಳದೆ ಬಂದೆ
ಕರಿರಾಜ ಅವ ನಿನ್ನ ಕಿರಿಯಪ್ಪನ ಮಗನೇನೊ
ಶರಣಾಗತರಕ್ಷವರಮಣಿ ಎಂಬೊ
ಬಿರುದು ಬೇಕಾದರೆ ಸರ್‍ರನೆ ಬಾರಯ್ಯ
ಗರುಡಗಮನ ಗೋಪಾಲವಿಠಲರೇಯ
ಕರುವಿನ ಮೊರೆಗಾವು ನೆರೆದಂತೆ ಪೊರೆಯುತ

೫೫

ಮೋಹನ

ನಾನೇನು ಮಾಡಿದೆನೋ ವೆಂಕಟರಾಯ
ನೀನೆನ್ನ ಕಾಯಬೇಕೋ

ಷ ಭ್ರಷ್ಟನಲ್ಲವೆ
ಬರುವ ಕರ್ಮ ಮಾಡಿದಜಮಿಳ ನಿಮ್ಮ
ನ ಮಗನೇನೋ ವೆಂಕಟರಾಯ ೧

ಾಜ ಕರೆಸಿದನೆ ದ್ರೌಪದಾದೇವಿ
ದೋಲೆ ಕಳುಹಿದಳೆ
ುಷಿ ಪತ್ನಿ ಕಲ್ಲಾಗಿ ಸ್ತ್ರೀಯಾದದ್ದು
ಯೆಲ್ಲ ಅರಿಯದೇನೋ ವೆಂಕಟರಾಯ ೨

ಡಿಯವಲಕ್ಕಿಯ ತಂದವನಿಗೆ
ಕೊಟ್ಟೆಯೊ ಭಾಗ್ಯವ
ಶಯನ ಶ್ರೀ ಪುರಂದರವಿಠಲ
ಮೇಯನೆ ಸಲಹೋ ವೆಂಕಟರಾಯ ೩

–

ಬೋದಿ ಅಟ್ಟ

ಂಸುವೆ ನಾನಿನ್ನ ಚರಣ ಕಮಲಕ್ಕೆ ವೆಂಕಟೇಶ
ುಸುವೆ ಭವದೊಳು ಶಮದಮೆಯಿಲ್ಲದೆ ವೆಂಕಟೇಶ ಪ

ನವಾದಾರಭ್ಯ ಮುಂದಿನ ಪರಿಯಂತ ವೆಂಕಟೇಶ
ಗು ಜನರ ಅನುಸರಿಸಿ ಆಯೂ ಕಳದೆ ವೆಂಕಟೇಶ ೧

ಮಾನ ವಿಷಯ ಚಿಂತನೆಯಿಂದ ಬಳಲೂವ ವೆಂಕಟೇಶ
ನಿನ್ನ ನೆನೆಯಲು ಹೊತ್ತಿಲ್ಲವಾಯಿತು ವೆಂಕಟೇಶ ೨

ು ಕೇಳಿಕೆಯಲ್ಲಾ ವ್ಯೋದನಕಾಯಿತು ವೆಂಕಟೇಶ
ಧು ಜನರಲ್ಲಿ ಯೆಲ್ಲಿ ನಿಂತಿಲ್ಲವೊ ವೆಂಕಟೇಶ ೩

ೀದಿಸುವೆನೊ ದುರ್ವಿಷಯ ಭುಂಜಿಸುತಲಿ ವೆಂಕಟೇಶ
ಧನವೆಂತಪ್ಪ ಯನಗಿನ್ನು ಧರೆಯೊಳು ವೆಂಕಟೇಶ ೪

ಆಡುವ ಮಾತೊಂದು ಮಾಡುವ ಕ್ರಿಯೆಯೊಂದು ವೆಂಕ
ನೀಡುವಿ ಯಂತು ಸುಫಲವ ಕುಮತಿಗೆ ವೆಂಕಟೇಶ

ಬೇಡುವೆ ಕಂಡದ್ದುಂಬಲಿಸಿ ಬಳಲುತ್ತ ವೆಂಕಟೇಶ
ನೋಡುಕರುಣದಿ ಚಿತ್ತಕೆ ಬಂದ ಪರಿ ವೆಂಕಟೇಶ

ಏಸೇಸು ಬಗೆಯಿಂದ ತಿರಿತಂದ ಧನದಿಂದ ವೆಂಕಟೇಶ
ಈ ಸತಿಸುತರು ಸಂತೋಷಪಟ್ಟದ್ದು ಕಾಣೆ ವೆಂಕಟೇಶ

ಹೇಸಿಕೆ ಜನರೊಳು ಹೇಳಿಕೊಂಡರಿದು ವೆಂಕಟೇಶ
ದೂಷಿತನಾದೆ ದೋಷ ಸಂಪಾದಿಸಿ ವೆಂಕಟೇಶ

ಘಾಳಿಯ ಗುದ್ದಿ ಕೈನೋಯಿಸಿಕೊಂಡಂತೆ ವೆಂಕಟೇಶ
ಬಾಳಿದೆ ಭವದೊಳು ಬಾಲಿಶತನದಿಂದ ವೆಂಕಟೇಶ

ಆಳಿದನೊಳು ಪೇಳಿ ದಾರಿಗುಸುರಲಿನ್ನು ವೆಂಕಟೇಶ
ಪಾಲಿಸು ಶಿಕ್ಷಿಸು ಸೊಲ್ಲು ನಿನ್ನದು ಶಿರಿ ವೆಂಕಟೇಶ

ವಿರಕ್ತಿಪುಟ್ಟದು ಕಾಣೊ ಅರೆಮರೆ ಮಾತೇನು ವೆಂಕಟೇಶ
ಶರಣು ಶರಣು ಶಾಶ್ವತ ಫಲದಾಯಕ ವೆಂಕಟೇಶ

ಕರಪಿಡಿದಪರಾಧ ಕ್ಷಮಿಸಿ ಸಲಹ ಬೇಕು ವೆಂಕಟೇಶ
ಪರತರ ಶ್ರೀಪತಿವಿಠಲ ದಯಾನಿಧೆ ವೆಂಕಟೇಶ

೫೭

**ತೋಡಿ**

ನಾರಾಯಣಾದ್ರಿಕೃತವಾಸ ಶರಣು
ತೋರಯ್ಯ ತವರೂಪ ರವಿಕೋಟಿಭಾಸ

ಆನತಜನರಾಪ್ತ ನೀನೆಂದು ಕೇಳಿ ಮಿಗೆ

ಆ ಸಲಿಲದೊಳು ಮಿಂದು ಕರಿವರಕರೆಯೆ ಬಂದೆ
ವಾಸವಾತ್ಮಜನು ಬಿನ್ನೈಸೆ ನಿನ್ನಯ ಮುಂದೆ
ಆ ಸಮರದೊಳಗೊಲಿವೆನೆಂದೆ ನಿನಗೆ
ಪಾಸಟಿಯಾರು ನೀರಜಭವನ ತಂದೆ

ಪೊಗಳಲರಿಯರು ಸುರರು ನಿನ್ನ ಮಹಿಮಾತಿಶಯ
ಬಗೆಯನರಿಯಳು ಲಕುಮಿ ಬದರಸನ್ನಿಭಕಾಯ
ಮುಗುಧಮಾನವ ತಿಳಿವನೇನೋ ತಿರುಮಲರಾಯ
ಖಗರಾಜಗಮನ ಕಮನೀಯ ಪಾಹಿ
ಜಗನ್ನಾಥವಿಠಲ ವಿಗತಾಘ ಕವಿಗೇಯ

## ೫೮

ನಿನಗ್ಯಾಕೆ ದಯಬಾರದೊ ಶ್ರೀ ಶ್ರೀನಿವಾಸ

ಅನುದಿನ ನಿನ್ನ ಪಾದ ವನರುಹ ನೆನೆಯುವ
ಘನದಾಸರ ದಾಸ್ಯವ ನೀಡುವುದಕಿನ್ನು

ನೀನು ಕುಣಿಸಿದಂತೆ ಕುಣಿಯುವೆ ಎನ್ನ
ಸ್ವಾಧೀನ ವೆಲ್ಲಿಹುದೈ ಲೇಶವಾದರು ದೇವ
ಮಾನಾಭಿಮಾನ ಸರ್ವವೂ ನಿನಗೊರುವಿಸಿ
ಧ್ಯಾನವ ಮಾಡುವೊ ದೀನನಾಮ್ಯಾಲಿನ್ನು

ಧ್ರುವ ಗಜ ದ್ರೌಪದಿ ಪಾಪಿ ಅಜಾಮಿಳ
ಇವರೆಲ್ಲ ನಿನಗುಪಕಾರ ಮಾಡಿದುದೆಂತೋ
ಕವಿಗೇಯ ಭಕ್ತವತ್ಸಲನೆನಿಸಿ ಅವರಂತೆ
ಅನುದಿನ ಪೊರೆಯಾಲೆನ್ನೊಳು

ಸಿಂಧುಶಯನ ಭವಬಂಧ ಮೋಚನ
ಸುರವೃಂದವಿನುತ ರಘುನಾಥ ವಿಠಲರೇಯ

ಮಂದಮತಿಯು ನಾನು ಕುಂದುಗಳೆಣಿಸದೆ
ಎಂದು ಪಾಲಿಸೊ ಎಂದು ಬೇಡಿಕೊಳುತಲಿರೆ

## ೫೯

ವರಾಳಿ

ನಿನ್ನ ಆರಸುತನಕ್ಕೇನೆಂಬೆನೊ ವೆಂಕಟೇಶಾ
ಘನ್ನ ಗಿರಿಯ ವಾಸ ಕಮಲಾಸನ ಜನಕ ತಿರುಮಲೇಶಾ

ಹರುವ ಸರ್ಪಯಿರುವ ಚೋರ
ಮುರುವ ಮೀರಿ ಒರುವ ಶರಧಿ ಉರೆವ ಕಿಚ್ಚು
ಕರುವು ಮೃತ್ಯು ಸರುವ ಮಳೆ ಬಿರುವನೆಲ್ಲ
ಹೊಡವ ದೈತ್ಯಾ ತೊರೆವ ಸನ್ನ್ಯಾವ
ಮೇರೆತಪ್ಪಿ ಭರದಿ ತನಗೆ ಇದರು
ಬಂದವ ಕಾಣುತತಿ ಹರಿಯ
ನಾಮ ಮುಟ್ಟುವ ದೇವ ಶ್ರೀನಿವಾಸಾ

ಸೃಷ್ಟಿ ಜನರಿಗೊಂದು ಆಳು
ಕೊಟ್ಟು ವೇಗದಿಂದ ಕರಿಯ ಲಟ್ಟದವರ ಕಾಣೆನಯ್ಯಾ
ಎಷ್ಟೆಷ್ಟು ದೂರದಿಂದಲಿ ಕಟ್ಟಕೊಂಡು ಹೊನ್ನು ಹಣ
ಗಳ ತಮಗೆ ತಾವ
ಅಟ್ಟಹಾಸದಿಂದ ಮಂಗಳವ ಪಾಡಿ
ಪೂರ ಮಟ್ಟು ಒಪ್ಪ ತಿರುವೆಂಗಳಾ

ಹದಿನೆಂಟು ಜಾತಿಯವರು ಒದಗಿ ಮುದದಿಂದ ಕುಣಿದು
ಪದೋಪದಿಗೆ ಹಾಡಿ ಪಾಡುತ
ಹದುಳವಾದ್ಯ ಪಂಚವಾದ್ಯ
ಎದುರು ನಿಂದು ಧ್ವನಿಯ ಮಾಡುತಾ
ದಾಸರೆಂಬೊ ಅಟ್ಟಹಾಸದ ಮಾತು ನುಡಿಯುತ್ತ
ನಿತ್ಯ ನಿನ್ನ ಮದುವೆಯೆಂದು ಪುಷ್ಪವು ಸುರಿಯುತಾ

ಪಲ್ಲಡಿಯೊಳಗೆ ಜನಿಸಿ ಜ್ಞಾನ
ವಿಲ್ಲದೆ ಸಲ್ಲುವರು ದುರಿತವ ವಹಿಸಿ

ಮನುಜರೆಣಿಕೆ ಏನು ಮತ್ತೆ ವನಜ ಸಂಭವ
ಈಶ ಮುಖ್ಯ ಅನಿಮಿಷರೆಲ್ಲ ಬಂದು ಭಯದಿ
ಮನಸಿನಲಿ ನಿನ್ನ ಅರಸುತನದ ಶೌರ್ಯವನ್ನು ಎಣಿಸುತ
ನಲಿಗಾಣದ ಮಣಿದು ಮಣಿದು ನಮಸ್ಕರಿಸುತಾ ವಾಲ್ಗೈಸುತಾ
ಹೊಣಿಯೊ ವಿಜಯ ವಿಠಲ ಎನುತಾ

## ೬೦

### ಮೋಹನ

ನಿನ್ನ ದಿವ್ಯ ಮೂರುತಿಯ ಕಣ್ಣುದಣಿಯ ನೋಡಿ
ಧನ್ಯನಾದೆನೋ ಧರೆಯೊಳು

ಇನ್ನು ಈ ಭವ ಭಯಕೆ ಅಂಜಲೇತಕೊ
ಚೆನ್ನ ಸಿರಿ ವೇಂಕಟೇಶ ಶ್ರೀಶ

ಏನುಜನ್ಮದ ಪುಣ್ಯ ಬಂದೊದಗಿತೋ ಶ್ರೀ ಸ್ವಾಮಿ ಪುಷ್ಕರಿಣಿಯ
ಲಿ ಸ್ನಾನ ಜಪತಪವ ಮಾಡಿ ವರಹ ದೇವರ ನೋಡಿ
ಶ್ರೀ ಸ್ವಾಮಿ ಮಹಾದ್ವಾರಕೆ
ಈ ಶರೀರವನು ಈಡಾಡಿ ಪ್ರದಕ್ಷಿಣೆಮಾಡಿ ಲೇಸಾಗಿ ಪೊಗಳುತಲಿ
ಆ ಸುವರ್ಣದ ಗರುಡಗಂಭವನೆ ನೋಡಿ ಸಂತೋಷದಲಿ
ಕೊಂಡಾಡಿದೆ ಬಿಡದೆ

ನೆಟ್ಟನೆರಡನೇ ದ್ವಾರವನೆ ದಾಂಟ ಪೋಗುತಲಿ ದಟ್ಟಣೆಯು
ಬಹು ಜನದಲಿ
ಘಟ್ಟಮನದಲಿ ತಲೆಯ ಚೆಟ್ಟಿಡುತ ನೆಟ್ಟನೇ ಕಟ್ಟಾಂಜನಕೆ

ಬೆಟ್ಟದಧಿಪತಿ ನಿನ್ನ ದೃಷ್ಟಿಂದ ಕಾಣುತಲಿ ಸುಟ್ಟಿತೆನ್ನಯ
ದುರಿತ

ಶಿರದಲ್ಲಿ ರವಿಕೋಟಿ ತೇಜದಿಂದೆಸವಂಥ ವರ ಕಿರೀಟವು
ಕೊರಳೊಳಿಹ ಸರಿಗೆ ವೈಜಯಂತಿಯ ಮಾಲೆ ಪರಿಪರಿಯ
ಉರದಿ ಶ್ರೀವತ್ಸವನು ಕರದಿ ಶಂಖಚಕ್ರಗಳು ವರನಾಭಿ
ನಿರುಪಮ ಮಣಿಖಚಿತ ಕಟಿಸೂತ್ರ ಪೀತಾಂಬರ ಚರಣದ
ದಂದುಗೆ

ಇಕ್ಷುಚಾಪನ ಪಿತನೆ ಪಕ್ಷೀಂದ್ರವಾಹನನೆ ಲಕ್ಷ್ಮೀಪತಿ ಕಮಲ
ಅಕ್ಷಯ ಅಜ ಸುರೇಂದ್ರಾದಿ ವಂದಿತನೆ ಸಾಕ್ಷಾಜ್ಜಗನ್ನಾಥ
ರಾಕ್ಷಸಾಂತಕನೆ ನಿರಪೇಕ್ಷ ನಿತ್ಯತೃಪ್ತನೆ ನಿರುಪಮ ನಿಸ್ಸೀಮ
ಕುಕ್ಷಿಯೊಳಗೀರೇಳು ಲೋಕವನು ತಾಳ್ದವನೆ ರಕ್ಷಿಸುವುದೆಂ
ದಯ

ಉರಗಗಿರಿ ಅರಸು ನಿಮ್ಮ ಚರಣಗಳ ಕಂಡಮೇಲೆ ಉರಗ
ಕರಿವ
ಅರಸು ಚೋರಾಗ್ನಿ ವೃಶ್ಚಿಕ ಮೊದಲಾದ ಪರಿಪರಿಯ ಬಹ
ಪರಮ ವಿಷಲಂಪಟದೊಳಗೆ ನಾ ಸಿಗದಂತೆ ಕರುಣಿಸುವು
ಸ್ಮರಗಧಿಕಲಾವಣ್ಯ ತಂದೆ ಪುರಂದರ ವಿಠಲ ಶರಣಜನ
ಕರುಣಾ

೬೧

ಕಲ್ಯಾಣಿ

ನಿನ್ನ ನಾನೆಂದೆನೋ ವೆಂಕಟರಾಯ
ಎನ್ನ ನೀ ಸಲಹಬೇಕೋ

ನಿನ್ನ ನಾನೇನೆಂದೆ ನಿಗಮಗೋಚರ ಸ್ವಾಮಿ

ನೀರ ಪೊಕ್ಕವನೆಂದನೆ– ಬೆನ್ನಿಲಿ ಘನ
ಭಾರಪೊತ್ತವನೆಂದನೆ– ಮಣ್ಣನಗೆದು
ಬೇರ ಮೆದ್ದವನೆಂದೆನೆ– ಹಿರಣ್ಯಕನು
ದರ ಬಗೆದ ನರಹರಿಯೆಂದೆನಲ್ಲದೆ

ಧರೆಯ ದಾನವಬೇಡಿ– ಶಿರವ ಅಡಿಯೊಳೊತ್ತಿ
ಪರಶುಪಿಡಿದು ಕ್ಷತ್ರಿಯರ ಸವರಿ
ಚರಣದಿ ಪಾಷಾಣ ಪೆಣ್ಣುಮಾಡಿದ ಪುಣ್ಯ
ಚರಿತಯಾದವಪತಿ ಶರಣೆಂದೆನಲ್ಲದೆ

ತಿರುಕಹಾರುವನೆಂದೆನೆ– ಹೆತ್ತತಾಯ
ಕೊರಳಕೊಯ್ದವನೆಂದೆನೆ– ವನವಾಸಕ್ಕೆ
ಭರದಿ ಚರಿಸಿದನೆಂದನೆ– ಪೂತನಿಯನು
ಸರಕು ಮಾಡದೆ ಕೊಂದ ಹರಿಯೆಂದೆನಲ್ಲದೆ

ಚಿತ್ತಜಕೋಟಿ ಲಾವಣ್ಯ ತೇಜದಿಬಂದು
ಉತ್ತಮ ಸ್ತ್ರೀಯರ ವ್ರತವಳಿದು
ಮತ್ತೆ ಕಲ್ಕಿಯಾಗಿ ಯವನರ ಕೆಡಹಿದ
ಹತ್ತಾವತಾರದ ಹರಿಯೆಂದೆನಲ್ಲದೆ

ಬತ್ತಲಿದ್ದವನೆಂದೆನೆ– ತೇಜಿಯನೇರಿ
ಒತ್ತಿ ಆಳ್ದವನೆಂದೆನೆ– ಬಾರಿಬಾರಿಗು
ಮತ್ತೆ ಪುಟ್ಟಿದನೆಂದೆನೆ– ಆದಿಕೇಶವ
ಭಕ್ತವತ್ಸಲನೆಂದು ಪೊಗಳಿದೆನಲ್ಲದೆ

## ೬೨

ಶಂಕರಾಭರಣ

ನಿನ್ನ ನೋಡಿ ಧನ್ಯನಾದೆನೊ, ಹೇ ಶ್ರೀನಿವಾಸ

ಲಕ್ಷ್ಮಿ ನಿನ್ನ ವಕ್ಷದಲ್ಲಿ
ರಕ್ಷ ಶಿಕ್ಷಣದಕ್ಷ ಪಾಂಡವ
ಪಕ್ಷ ರಕ್ಷ ಕಮಲಾಕ್ಷ

ದೇಶದೇಶ ತಿರುಗಿ ನಾನು
ಆಶಾಬದ್ಧನಾದೆ ಸ್ವಾಮಿ
ದಾಸನು ನಾನಲ್ಲವೆ ಜಗ
ದೀಶ ಶ್ರೀಶ ಶ್ರೀನಿವಾಸ

ಕಂತುಜನಕ ಕೇಳೊ ನೀ ನಿ
ರಂತರದಿ ನಿನ್ನ ಸೇವೆ
ಅಂತರಂಗದಿ ಪಾಲಿಸಯ್ಯ
ಹೊಂತಕಾರಿ ಪುರಂದರವಿಠಲ

೭೩

ಬಹರಿ

ನಿನ್ನ ಮಹಿಮೆಯನಾರು ಬಲ್ಲರು
ಚಿನ್ಮಯಾತ್ಮಕನಂತರೂಪನೆ
ಮುನ್ನ ಕಮಲಜ ನಿನ್ನ ನಾಭಿಯೊಳುನ್ನತೋನ್ನತದಿ
ಘನ್ನ ತಪವಂಗೈದು ಕಾಣನು
ಇನ್ನು ಶ್ರುತಿ ಸ್ಮೃತಿ ಅರಸಿ ಅರಿಯವು
ಪನ್ನಗೇಂದ್ರನು ಪೊಗಳಲರಿಯ ಪ್ರಸನ್ನವೆಂಕಟನೆ

ಹರಿಯೆ, ತ್ರಿದಶರ ಧೊರೆಯೆ, ಭಕುತರ
ಶಿರಿಯೆ, ದಿತಿಜಾರರಿಯೆಽನವರತ
ಮರಿಯದಿಹ ಅಜ ಹರಯತೀಶ್ವರರರಿಯರಿನ್ನುಳಿದ
ಇರವು ಮನುಜ ನಾ ಕರಿಯ ಲಾಪಿಸೆ
ಪೊರಿಯೊ ಬಿಡದೆ ಪ್ರಸನ್ನವೇಂಕಟ
ಗಿರಿಯರಸೆ ಜಗದ್ಧೊರೆಯೆ ಸುರವರವರಿಯ ಮಾಸಹನ

[illegible]

ನಾಗಹರ ಸಖ ನಾಗಗಗನ ಮಣಿ

ನಾಗಗ್ರಸಿತಭಾ ನಾಗದ್ವಿಟ ಮುಖ ನಾಗಧರಸುತ

ನಾಗಮದಹ ಪ್ರಸನ್ವೆಂಕಟೇಶಾ 3

## ೬೪

**ಶಂಕರಾಭರಣ** **ಆದಿ**

ನೋಡಿದೆ ವೇಂಕಟ ನಿನ್ನ ನೋಡಿದೆ ಪ

ನೋಡಿದೆ ವೇಂಕಟ ನಿನ್ನ

ಕೊಂಡಾಡಿ ಬೇಡಿದೆ ವರವನ್ನ ಆಹಾ

ರೂಢಿಯೊಳಗೆ ನಿನಗೆ ಈಡುಗಾಣೆನೊ ದೇವ

ನಾಡುದೈವಗಳೆಲ್ಲ ಓಡಿಪೋದವೊ ಸ್ವಾಮಿ ಅ

ಮಣಿಗಣಮಯದ ಕಿರೀಟ, ಕಪ್ಪು ವ

ರಣಕುಂತಲದ ಲೋಲ್ಯಾಟ, ಯುಗ ಕ

ರಣಕುಂಡಲ ಬಹು ಮಾಟ ಅರ

ಗಿಣಿ ಶಶಿಪೋಲ್ವ ಲಲಾಟ ಆಹಾ

ಎಣೆಗಾಣೆ ಕಸ್ತೂರಿ ಮಣಿರ್ದಿಪ ಭ್ರೂಯುಗ

ಕುಣಿಯುತ ಸ್ಮರಧನು ಗಣಿಸದೊ ಎಲೋದೇವ (

ವಾರಿಜಯುಗಸಮನಯನ, ನಾಸ

ಚಾರುಚಂಪಕ ತೆನೆ, ವದನದೊಳು

ತೋರುವ ಸುಂದರರದನ ಪಂಕ್ತಿ

ಸಾರಿದಾಧರ ಬಹು ಅರುಣ, ಆಹಾ

ಸಾರಸಮುಖದೊಳು ಸೇರಿ ಶೋಭಿಪ ಚುಬಕ

ಕೂರುಮಯುಗಕದಪು ಸಾರಕಟಾಕ್ಷವ

ಕಂಧರಾಂಕಿತ ಸತ್ರಿರೇಖಾ ಕಂಠ

ಸ್ಕಂಧದಿ ಶೋಭಿಪ ಒಂದು ಸರಿಗೆಯನ್ನು

ಸ್ವನ್ನ ಏಕಾವಳಿಹಾರಾ, ಬಾ
ವನ್ನ ಪುತ್ಥಳಿ ಸಿರಿಯಾಕಾರ, ಬಹು
ಚನ್ನವಾಗಿಹ ನಾನಾಹಾರ, ಶುಭ್ರ
ವರ್ಣಶೋಭಿಪ ಜನಿವಾರ ಆಹಾ
ಇನ್ನು ಗುಂಡಿನಮಾಲೆ, ಘನ್ನಜಲಸರಪಳಿ
ಉನ್ನತದಾನರ್ಘ್ಯ ರನ್ನ ಜಯಂತಿಯಾ

ಶಿರವತ್ಸಲಾಂಛನಹೃದಯ, ಸುರ
ಕರಿಕರತೆರ ಬಾಹು ಶಿರಿಯಾ, ನಾಲ್ಕು
ಕರಗಳೊಪ್ಪುವವೀಪರಿಯ, ಮೇಲಿ
ನ್ನೆರಡು ಹಸ್ತದಿ ಶಂಖ ಅರಿಯ ಆಹಾ
ವರರತ್ನ ಮುದ್ರಿಕೆ ಧರಿಸಿದ ಬೆರಳುಳ್ಳ
ಕರತೋಡ ಕಡಗಕ್ಕೆ ಸರಿಗಾಣೆ ಧರೆಯೊಳು

ಪರಮವೈಕುಂಠದಕಿಂತ ಈ
ಧರಿತಳವಧಿಕವೆನ್ನು ತಾ ಬಲ
ಕರದಿಂದ ಜನಕೆ ತೋರುತಾ ಬಾಹು
ಎರಡು ಆಜಾನುಪೂರಿತಾ ಆಹಾ
ಸ್ವರಣರತ್ನ ಖಚಿತ ವರನಾಗಭೂಷಣ
ಧರಿಸಿ ಟೊಂಕದಿ ವಾಮಕರವಿಟ್ಟು ಮೆರೆವೋದು

ಹಸ್ತಯುಗದಿ ತೋಡ್ಯ ಕಡಗ, ಪ್ರ
ಶಸ್ತ ರತ್ನದ್ಧರಳಸಂಘ ರಚಿತ
ಸಿಸ್ತಾದ ಉಂಗುರ ಬೆಡಗ, ಬಹು
ವಿಸ್ತರಾಂತರ ಭುಜಯುಗ ಆಹಾ
ಹಸ್ತಿವರದ ಸಮಸ್ತಲೋಕಕೆ ಸುಖ
ವಿಸ್ತಾರ ನೀಡುತ ಸಿಸ್ತಾದ ದೇವನ

ಬಿದುರಶೋಭಿತ ಮಹಾಚದುರದೊಡ್ಯಾಣವು
ಪದಕ ಮುತ್ತಿನ ತುದಿ ವಿಧವಿಧ ಪೊಳೆವೋದು

ಕುಂಭಿಮಸ್ತಕದೋಲ್ಲಿತಂಬ ದಿಂದ
ರಂಭೆ ಪೋಲುವ ಊರುಸ್ತಂಭ, ಇಂದು
ಬಿಂಬವೆನಿಪ ಜಾನು, ಡಿಂಬ ಭಕ್ತಕ
ದಂಬ ಮೋಹಿಪ ವಿಡಂಬ ಆಹಾ
ಅಂಬುಜಾಸನಪಿತನ ತುಂಬಿದ ಮೀನ್ಜಂಘೆ
ನಂಬಿದ ಜನರನ್ನ ಇಂಬಾಗಿ ಸಲಹೋನಾ

ಪರಡೆರಡು ಮಾಣಿಕ್ಯಾವರಣ, ಪೊಳೆವ
ಕಿರುಗೆಜ್ಜೆನೂಪುರಾಭರಣ ಇಟ್ಟು
ಮೆರೆವೊ ಗಂಗೆಯ ಪೆತ್ತ ಚರಣ ಯುಗ
ನಿರುತ ಭಜಿಪರೊಳತಿ ಕರುಣ ಆಹಾ
ಮರೆಯದೆ ಮಾಡುತ ಪರಿಪರಿ ಸೌಖ್ಯವ
ಕರೆದುನೀಡುವನಹಿಗಿರಿವಾಸ ಶ್ರೀಶನ್ನ

ಪೋತೇಂದು ನಖಯುತ ಬೆರಳ ಸಾಲು
ದೂತತತಿಗೆ ಸುಖಗಳ ನಿತ್ತು
ನೀತಜ್ಞಾನ ಭಕ್ತಿಗಳ ನಿತ್ಯ
ಪ್ರೀತಿಪಡೆಯೆ ಮುಕ್ತಿಗಳ ಆಹಾ
ವಾತಗುರುಜಗನ್ನಾಥವಿಠಲನತಿ
ಪ್ರೀತಿಂದ ಪುರುಷಾರ್ಥ ದಾತನಾದುದು ನಿತ್ಯ

೬೫

ಆಸಾವೇರಿ

ನೋಡಿರಮ್ಮ ವೆಂಕಟೇಶ ಹೂಡಿದಾಟವಾ
ಹುಡುಗರಾಟವಾ ಮದುವೆ ಕೂಟವಾ

ತನ್ನನು ತಾನೇ ಬೇಡಿದಂಥಾ ಗನ್ನಗತಕಾವಾ
ಹುಣ್ಣಿಗೆ ಹತ್ತಿಹಾಲನ್ನಿಟ್ಟಾ ಚಿನ್ಮಯ ಕೃತವಾ
ಕನ್ಯೆಯರಲ್ಲಿ ತನ್ನಯ ಮನದ ಬನ್ನವ ಪೇಳುವಾ ಅನ್ಯರ
ಲೆಕ್ಕಿಸದುನ್ನತ ಮಹಿಮ ಅರಣ್ಯಕೆ ಬೇಟೆಗೆ ಹೋದನುವಾ

ಕಾಮಾವಿಲ್ಲದ ಸ್ವಾಮಿ ವನದಿ ಭಾಮೆಯ ಮೋಹಿಸುವಾ
ವ್ಯೋಮರಾಜನ ಧಾಮದಿ ಛದ್ಮದಿ ಸಾಮುದ್ರಿಕನೊರೆವಾ
ಸಾಮಾನ್ಯನ ತೆರಮಾಮಾನಿನಿಪತಿ ಹೇಮವ ಕಡ ತರುವಾ
ಹೇಮೋದರನ ಇಚ್ಛಾಮಾತ್ರದಿ ಪಡೆದ ಮಹಿಮನ ಕಲ್ಯಾಣಸಂಭ್ರಮವ

ಕಲಿಯುಗ ಜನರಿಗೆ ಕಲ್ಲಿನ ಪರಿಯಲಿ ತೋರುವ ವಿಗ್ರಹನಾ
ಬಲು ಪಾತಕಿ ಹೊಲೆ ಕುಂತಳೆಪತಿಯನು ಸಲಹಿದ ವೇಂಕಟನ
ಬಾಲಕಗಾಯುಧಜಾಲವನಿತ್ತ ಕುಲಾಲೋದ್ಧಾರಕನಾ
ಬಾಲನಸಹಿತದೂಳಾ ಲಲನೆಗೆ ದೇಹಾಲಯವಿತ್ತ ವಿಶಾಲಮಹಿಮನಾ

ವತ್ಸರಕೊಮ್ಮೆ ಸದುತ್ಸವದಿಂದ ಬ್ರಹ್ಮೋತ್ಸವಗೊಳ್ಳುವನಾ
ಮತ್ಸರಿಸುವ ಜನಹೃತ್ಸರಸಿಜಕತಿ ಜ್ಯೋತ್ಸ್ನವ ಬೀರುವನಾ
ಸತ್ಸಹವಾಸದಿ ಚಿತ್ತೈಸಲು ಅಘ ಭರ್ತ್ಸನೆ ಮಾಡುವನಾ
ಹೃತ್‌ಸ್ಥಿತ ತಂದೆ ವೆಂಕಟೇಶವಿಠಲ ಶ್ರೀವತ್ಸಾಂಕಿತನಾಶ್ಚರ್ಯೋತ್ಸುಕನಾ

೭೭

ಕಾಂಬೋದಿ

ನೋಡು ನೋಡು ವೆಂಕಟೇಶ
ನೋಡು ನೋಟವ ಆವನು
ಆಡುವಾಟವ
ಬೇಟೆಗಾಗಿ ಹೊರಟು ಬಂದ ಪ್ರಖ್ಯಾತವ

ಡಂಗುರವ ತೀಡಿ ಮೈಯೊಳು ಗಂಧ ಪೂಸಿದ

ಸ್ವಾಮಿ ಕಸ್ತೂರಿ ಹಚ್ಚಿದ

ನೊಸಲಮೇಲೆ ಮೃಗನಾಭಿ ತಿಲಕ ಧರಿಸಿದ
ಸ್ವಾಮಿ ತಿಲಕ ಧರಿಸಿದ

ಒರೆ ತುರುಬ ಓರೆ ಜಡೆಯ ಗೊಂಡೆ ಕಟ್ಟಿದ
ಸ್ವಾಮಿ ಗೊಂಡೆ ಕಟ್ಟಿದ

ಎಂಟು ಎಂಟು ಮುತ್ತಿನ ವಂಟಿ ಇಟ್ಟನೆ
ಸ್ವಾಮಿ ವಂಟಿ ಇಟ್ಟನೆ

ಕಂಠದಲ್ಲಿ ಕೌಸ್ತುಭ ಆಭರಣವಿಟ್ಟನೆ
ಸ್ವಾಮಿ ಆಭರಣವಿಟ್ಟನೆ

ಪಾದದಲ್ಲಿ ಹೊನ್ನಂದುಗೆ ನೂಪುರವಿಟ್ಟನೆ
ಸ್ವಾಮಿ ಬಾಪುರಿ ಇಟ್ಟನೆ

ಕಿರುಗೆಜ್ಜೆ ಪಾಡಗ ಪೆಂಡೆ ಕಾಲಲಿಟ್ಟನೆ
ಸ್ವಾಮಿ ಕಾಲಲಿಟ್ಟನೆ

ಅಂಗುಲಿಗೆ ತಕ್ಕಂಥ ಉಂಗುರವಿಟ್ಟನೆ
ಸ್ವಾಮಿ ಹೊನ್ನುಂಗುರವಿಟ್ಟನೆ

ತೋಳರಕ್ಷಮಣಿ ಹಸ್ತಕಡಗ ಇಟ್ಟನೆ
ಸ್ವಾಮಿ ಕಡಗ ಇಟ್ಟನೆ

ಹಾರಪದಕ ಹುಲಿಯುಗುರು ವೈಜಯಂತಿಯು
ಕೊರಳೊಳು ವೈಜಯಂತಿಯು

ದುಂಡು ಮುತ್ತು ಕಟ್ಟ ಸರಿಗೆ ತಾಳಿ ಧರಿಸಿದ
ಸ್ವಾಮಿ ತಾಳಿ ಧರಿಸಿದ

ಬಂದಿಕಂಕಣ ಬಾಪುರಿ ವಂಕಿ ಇಟ್ಟನೆ
ಸ್ವಾಮಿ ವಂಕಿ ಇಟ್ಟನೆ

ಸ್ವಾಮಿ ಕವಚವಿಕ್ಕಿದ

ದಿಟ್ಟ ವೇಂಕಟೇಶ ಬೇಟೆಯಾಡ ಹೊರಟನೆ
ಸ್ವಾಮಿ ಬೇಟೆಯಾಡ ಹೊರಟನೆ

ಪಟ್ಟವಾಳಿ ಶಾಮಿಯ ಕಸೆಯ ಬಿಗಿದನೆ
ಸ್ವಾಮಿ ಕಸೆಯ ಬಿಗಿದನೆ

ಹುಡಿಯಕಟ್ಟು ನಡುವಿಗೆ ಕಟ್ಟಾಣಿ ಹೊಗಿಸಿದ
ಸ್ವಾಮಿ ಕಟ್ಟಾಣಿ ಹೊಗಿಸಿದ

ಓರೆ ತುರುಬಿನ ನಾಯಕ ಬಾರದ್ವೋದನೆ
ಸ್ವಾಮಿ ಬಾರದ್ವೋದನೆ

ಚೆಲುವ ಚೆನ್ನಿಗರಾಯನಾಗಿ ವನಕೆ ಹೊರಟನೆ
ಸ್ವಾಮಿ ವನಕೆ ಹೊರಟನೆ

ಜಗವೆಲ್ಲ ನೋಡುತಿರಲು ತೇಜಿಯೇರಿದ
ಸ್ವಾಮಿ ತೇಜಿಯೇರಿದ

ತ್ರಿಜಗವನ್ನ ಪಾಲಿಸೆಂದು ತೇಜಿ ಹಿಡಿದನೆ
ಸ್ವಾಮಿ ವಾಜಿ ಹಿಡಿದನೆ

ಗಟ್ಟಬೆಟ್ಟವನ್ನ ಸುತ್ತಿ ಕಷ್ಟಬಟ್ಟನೆ
ಸ್ವಾಮಿ ಕಷ್ಟಬಟ್ಟನೆ

ವೃಕ್ಷ ಮೂಲದಲ್ಲಿ ಮಿಂಚುತಿಹಳ ಕಂಡನೆ
ಸ್ವಾಮಿ ಮಿಂಚುತಿಹಳ ಕಂಡನೆ

ಸೋಲಮುಡಿಯ ಸೋಗೆಗಣ್ಣ ಓರೆನೋಟವ
ಅವಳ ಓರೆನೋಟವ

ನೀಲವರ್ಣದ ಕೋಮಲಾಂಗಿ ಮೇಲೆ ಛಾಯವ
ಅವಳ ಮೇಲೆ ಛಾಯವ

ಅವಳು ನೋಡುತಿರುವಳು ೨೮

ಕುಂಜರಗಮನೆಯಂತೆ ತಿರುಗುತಿರುವಳು
ಅವಳು ಒಲೆವುತಿರುವಳು ೨೯

ವನವ ಬಿಟ್ಟು ವನಕೆ ವನಕೆ ಹಾರುತಿರುವಳು
ಅವಳು ಹಾರುತಿರುವಳು ೩೦

ಅವಳ ಕಂಡು ವೆಂಕಟೇಶ ಭ್ರಾಂತಿಬಟ್ಟನೆ
ಸ್ವಾಮಿ ಭ್ರಾಂತಿಗೊಂಡನೆ ೩

ಅಡ್ಡದಾರಿಯಲ್ಲಿ ಮೋರೆ ನೋಡುತ್ತಿದ್ದನೆ
ಸ್ವಾಮಿ ನೋಡುತ್ತಿದ್ದನೆ ೩

ದಾರಿಗಡ್ಡ ನಿಂದಿರಲಾರ ಹೀನ ರಾವುತ
ಎಲೊ ಹೀನ ರಾವುತ ೩

ಪರನಾರಿಯರ ಕಂಡು ಮೋರೆ ಹೇಗೆ ಮಾಡುತಿ
ಎಲೊ ಹೇಗೆ ಮಾಡುತಿ ೩

ಹೀನನಲ್ಲವೆ ನಿನ್ನ ಹುಡುಕ ಬಂದೆನೆ
ನಿನ್ನ ಹುಡುಕ ಬಂದೆನೆ ೩

ನಿನ್ನ ಗುರುಕುಚಗಳ ಕಂಡು ಭ್ರಾಂತಿಗೊಂಡೆನೆ
ನಾನು ಭ್ರಾಂತಿಗೊಂಡೆನೆ ೩

ಲಂಡ ಪುಂಡರ ಮಾತು ಆಡದಿರೊ
ಎನ್ನ ಕೂಡಾಡದಿರೊ ೩

ಕತ್ತಿ ಕಠಾರಿ ನಿನ್ನ ಸೇನೆಗಂಜೆನೊ
ನಾನು ಸೇನೆಗಂಜೆನೊ ೩

ನಿನ್ನ ಬಿರುದ ಬಿಟ್ಟುಕೊಟ್ಟು ಬಾರೆ ಚುಂಚುಕಿ
ಬೇಗ ಬಾರೆ ಚುಂಚುಕಿ ೩

ಅತ್ತ ಸಾರೊ ರಾವುತ ೪೧

ನೀಲವೇಣಿ ಎನ್ನ ಕೂಡ ನಿಲ್ಲಲಾರೆಯ
ಎನ್ನೊಳ್ ನಿಲ್ಲಲಾರೆಯ ೪೨

ನಿನ್ನ ಮುಖ ಪದ್ಮಗಳ ಕಂಡು ಭ್ರಾಂತಿಗೊಂಡೆನೆ
ನೀರೆ ಭ್ರಾಂತಿಗೊಂಡೆನೆ ೪೩

ಹೀನ ಮಾತನಾಡದಿರೊ ಹೀನ ರಾವುತ
ಎಲೊ ಹೀನ ರಾವುತ ೪೪

ವಾರಿಜಾಕ್ಷಿ ಎನ್ನ ಕೂಡ ವಾದವೇತಕೆ
ಎಲೆ ವಾದವೇತಕೆ ೪೫

ಪ್ರೇಮದಿಂದ ಬಂದು ತೊಡೆಯ ಮೇಲೆ ಏರೆ ಚುಂಚುಕಿ
ಮೇಲೆ ಏರೆ ಚುಂಚುಕಿ ೪೬

ತೊಡೆಯ ಮೇಲೆ ಏರಲಿಕ್ಕೆ ಮಡದಿಯೆ ನಾನು
ಎಲೊ ಮಡದಿಯೆ ನಾನು ೪೭

ಹೀನ ಮಾತನಾಡದಿರೋ ಹುಡುಗ ರಾವುತ
ಎಲವೊ ತುಡುಗ ರಾವುತ ೪೮

ರಾಜ್ಯಭೂಮಿಗಳನು ನಾನು ಅಷ್ಟು ಕೊಡುವೆನು
ನಿನಗೆ ಬಿಟ್ಟುಕೊಡುವೆನು ೪೯

ನಿನ್ನೊಡೆಯನೆಂದು ಪಾಲಿಸೆ ಚುಂಚುಕಿ
ಬೇಡಿಕೊಂಬೆ ನಾಯಕಿ ೫೦

ರಾಜ್ಯ ಭೂಮಿಯಾಳಲಿಕ್ಕೆ ರಾಯನೇ ನಾನು
ಎಲೊ ರಾಯನೇ ನಾನು ೫೧

ದೊಡ್ಡ ಅಡವಿ ಬೆಟ್ಟದೊಳಗೆ ಆಹಾರವೇನೊ
ಎಲೊ ಆಹಾರವೇನೊ ೫೨

ಎಷ್ಟು ಪೇಳ್ದರು ಕೇಳಲಿಲ್ಲ ಏನ ಮಾಡಲಿ
ಇನ್ನೇನು ಮಾಡಲಿ ೫

ಅಡವಿಯೊಳಗೆ ದಾರಿಲ್ಲೆಂದು ಜುಲ್ಮೆ ಮಾಡಿದ
ಸ್ವಾಮಿ ಜುಲ್ಮೆಮಾಡಿದ ೫

ಸ್ವಾಮಿ ಪುಷ್ಕರಣಿಯ ತೀರದಲ್ಲಿ ವಾಸಮಾಡಿದ
ಸ್ವಾಮಿ ವಾಸಮಾಡಿದ ೫

ವರಹವತಾರ ತಾನೆಂದು ಅರಸನಾದನೆ
ಸ್ವಾಮಿ ಅರಸನಾದನೆ ೫

ಕೊಲ್ಲಾಪುರದಲ್ಲಿ ತನ್ನ ನಾರಿಯಿಟ್ಟನೆ
ಸ್ವಾಮಿ ನಾರಿಯಿಟ್ಟನೆ ೬

ಬೆಟ್ಟ ನಡೆವರಿಲ್ಲವೆಂದು ಕೃಷ್ಣ ನಡೆದನೆ
ಸ್ವಾಮಿ ಕೃಷ್ಣ ನಡೆದನೆ ೬

ಸ್ವಾಮಿ ವೆಂಕಟೇಶ ತಾನು ಬೇಟೆಯಾಡಿದ
ಸ್ವಾಮಿ ಬೇಟೆಯಾಡಿದ ೬

ಅಪ್ಪ ವೆಂಕಟೇಶ ತಾನು ಒಪ್ಪದಿಂದಲಿ
ಸ್ವಾಮಿಗಿರಿಗೆ ಬಂದನೆ ೬

ಶ್ರೀಶ ಪುರಂದರವಿಠಲನೆಂದು ಹಾಗೆ ನಿಂದನೆ
ಸ್ವಾಮಿ ಹಾಗೆ ನಿಂದನೆ ೬

೭ ೭

ಮಧ್ಯಮಾವತಿ ಝಂ

ಪನ್ನಗಾದ್ರಿನಿವಾಸ ಸುದರ್ಶನಪಾಂಚ
ಜನ್ಯಧರ ದೂರ್ವಾಸಪ್ರಮುಖಮುನಿಸ
ಮಾನ್ಯ ಕರುಣಾವಿಲಾಸ ಶ್ರೀ ಶ್ರೀನಿವಾಸ ಪ

ನಿನ್ನವರೊಳಗೆಣಿಸನುದಿನ
ಮನ್ಮನಾಲಯದೊಳು ನೆಲಸು ಮೈ
ಗಣ್ಣನನುಜ ವರಾಭಯ ಶ್ರೀಕರ

ಕಾಮಿತಪ್ರದ ಕೋಲ ಅಂಜನಾಧರಧಾರ
ಧಾಮ ಭೂಮಿವಿಲೋಲ ಶಂಖನೃಪವರದ
ಹೇಮಲೋಚನಕಾಲ ದ್ವಿಜಮಹಿಳೆನುಳುಹಿದ
ಶ್ಯಾಮಲಾಂಗ ಸುಶೀಲ ವೆಂಕಟಕುಲಾಲ
ಭೀಮಗೊಲಿದ ಮಹಾಮಹಿಮ ಪಿ
ತಾಮಹನ ನಾಸೋದ್ಭವ ವಿಯ
ದ್ಭೂಮಿಪತಿಜಾಮಾತ ಕಿಟಸು
ತ್ರಾಮಸುತಸೂತಪ್ರಮೋದ ಸು
ದಾಮಸೌಖ್ಯಪ್ರದ ವರದ ತ್ರ
ಯೀಮಯಪ್ರಣತಾರ್ತಿಹರ ಬಲ
ರಾಮನಾನುಜ ದಂಷ್ಟ್ರಿ ಸಾಲಿ
ಗ್ರಾಮಸದನ ಸಹಸ್ರನಾಮ
ಸಾಮಜಪತಿಪೋಷಕ ರಿಪುವನ
ಧೂಮಧ್ವಜವಿಧಿಭವಸೇವಿತ
ವ್ಯೋಮಾಳಕಸಖ ಸರ್ವಜ್ಞ ರ
ಮಾಮನೋಹರ ಮನ್ನಿಪುದೆನ್ನ

ದೀನಜನಮಂದಾರ ದೇವಕೀಸುತಜಗ
ತ್ರಾಣಗುಣಗಂಭೀರ ಪೃಥ್ವೀಶತೋಂಡ
ಮಾನವರದ ಉದಾರ ಲುಬ್ಧಕನ ವಿಷ್ವ
ಕ್ಸೇನನೆನಿಸಿದಧೀರ ವೆಂಕಟವಿಹಾರ
ವೈನತೇಯವರೂಥ ಖಳಸ್ವ
ರ್ಭಾನುವಿನ ತಲೆಗಡಿದು ರವಿಶಶಿ
ಕ್ಷೋಣಿಜ ಬುಧಗುರು ಕವಿಶನಿಗಳ

ಭಾನುಸಮ ಸಂಪೂಜ್ಯ ಸುಮನಸ
ಧೇನು ಶರಣಜನರ್ಗೆ ಸಂತತ
ನಾ ನಮಿಸುವೆ ನಳಿನಜಪಿತ ನಿ
ರ್ವಾಣದ ನಿರವದ್ಯ ನೀರಜಾ ಬ್ರ
ಹ್ಮಾಣಿ ಸುರನಿಕರನಿಲಯ ಅನುಸಂ
ಧಾನಕೆ ಕೊಡು ಬಹುವಿಧ ಕರ್ಮ

ಸಾರಶ್ರೀಮದನಂತ ಸನಕಾದಿಸೇವ್ಯ ಪಾ
ದಾರವಿಂದ ಮಹಂತ ಸತ್ವಾದಿ ತ್ರಿಗುಣವಿ
ದೂರ ದಿತಿಜಕುಲಾಂತ ಗುಣರೂಪ ಪಾರಾ
ಪಾರ ವಿಗತಾದ್ಯಂತ ಶ್ರೀಭೂಮಿಕಾಂತ
ಶೌರಿ ಶಫರ ಕಮಠ ವರಾಹ ಕ
ರ್ಬುರಕಶ್ಯಪುವಿದಾರಣನೆ ಭಾ
ಗೀರಥಿಯ ಪದನಖದಿ ಪಡೆದಂ
ಗಾರವರ್ಣನೆ ಭೃಗುಕುಲೋದ್ಭವ
ವಾರಿನಿಧಿಬಂಧನ ವನೌಕಸಪರಿ
ವಾರಪೋಷಕ ನಂದಗೋಪಕು
ಮಾರ ತ್ರಿಪುರವಿದೂರ ತುರಗವ
ನೇರಿದ ಜಗನ್ನಾಥವಿಠಲ
ಸಾರುವೆ ತವ ಪದಪಂಕಜ ಜಂ
ಭಾರಿಮದವಿಭಂಜನ ಭವಭಯ
ತಾರಕನಿನ್ನವರೊಳು ತತ್ವವಿ
ಚಾರವಕೊಡು ಚಿರಕಾಲದಲಿ

೭೮

ಯಮುನಾಕಲ್ಯಾಣಿ

ಪನ್ನಗಾದ್ರಿಪತಿ ನಮಗೆ ನೀ ಗತಿ

ಮಾನವ ವೇಷ ಮಂಜುಳ ಭಾಷ
ವಿನುತ ವಿಶೇಷ ಕೌಸ್ತುಭ ಭೂಷ

ಶಂಕಿಸುತಿರಲು ಸಾಕುವ ಬಾಲ
ಸಂಖ್ಯೆಯು ಬಲ್ಲ ಪುರಂದರವಿಠಲ

೭೬

ಪಾದಕಂಡು ಪಾವನಾದೆನು ಶ್ರೀಗಿರಿಯ ನಿಲಯನ
ಪಾದಕಂಡು ಪಾವನಾದೆನು

ಪಾದಕಂಡು ಪಾವನಾದೆನು
ಮಾಧವನ ಪ್ರಸಾದ ಪಡೆದೆನು
ಹಾದಿಗಾಣದೆ ಪರಮ ದುರ್ಭವ
ಬಾಧೆಯೊಳು ಬಿದ್ದು ತೊಳಲಿ ಬಳಲುತ
ಮೇದಿನಿಯೊಳು ಜನುಮ ತಾಳಿ
ಭೇದಮತದ ಹಾದಿಬಿಟ್ಟು

ನೀಲಬಣ್ಣದೊಪ್ಪುವ ಸುಂದರ ಶುಭಕಾಯ ಇಂದಿರ
ಲೋಲ ತ್ರಿಜಗಮೋಹನಾಕಾರ ಕೊರಳಪದಕ
ಮಾಲ ಕೌಸ್ತುಭ ಮುಕುಟಮಣಿಹಾರ ರತ್ನದುಂಗುರ
ಕಾಲೊಳ್ಹೊಳೆಯುವ ಗೆಜ್ಜೆಸರಪಳಿ
ಶೀಲವೈಷ್ಣವ ನಾಮ ಪಣೆಯಲಿ
ಕಾಳರಕ್ಕಸಕುಲಸಂಹಾರನ
ಪಾಲಸಾಗರಕನ್ನೆವರನ
ಪಾಲಮೂಲೋಕಸಾರ್ವಭೌಮನ
ಮೇಲು ಭೂವೈಕುಂಠದಲ್ಲಿ

ಉಟ್ಟದುಕೂಲ ಶಲ್ಯ ಜರತಾರ ಕೈಯಲ್ಲಿ ಕಂಕಣ
ಪಟ್ಟೆ ರತ್ನದ ನಡುವಿಗುಡಿದಾರ ವರ್ಣಿಸುವರಾರು
ಸೃಷ್ಟಿಯೊಳಗೀತ ಮೀರಿದವತಾರ ಇನಕೋಟಿ ಪ್ರಭಾಕರ

ಇಷ್ಟದಾಯಕ ದಿಟ್ಟ ದೇವನ

ಒಂದೆ ಮನದಲಿ ಸಕಲ ಸೇವಕರು ಭಯಭಕುತಿಯಿಂದ
ಬಂದು ಹರಕೆಯ ತಂದು ನೀಡುವರು ತುಂಬುರನಾರದ
ರೊಂದಿಗಾನದಿಂ ಪಾಡಿ ಪೊಗಳುವರು ಆನಂದ ಕೋರುವರು
ಹೊಂದಿ ಭಜಿಸುತ ಸಪ್ತಋಷಿಗಣ
ಬಂದು ಇಳಿವರು ಬಿಡದೆ ಅನುದಿನ
ವಂದ್ಯ ನಿಗಮಾದಿಬಂಧು ಭಜಿಪರ
ಕಂದುಗೊರಳಾದಿ ಬ್ರಹ್ಮಸುರರಿಂ
ಗಂಧಪರಿಮಳ ಕುಸುಮ ದ್ರವ್ಯಗ
ಳಿಂದ ಸೇವೆಯಗೊಂಬ ದೇವನ

ಉದಯಕಾಲದಿ ಬಾಲನವತಾರ ಮಧ್ಯಾಹ್ನಕಾಲದಿ
ಸದಮಲಾಂಗ ಯೌವನಾಕಾರಸುಸಂಧ್ಯಾಕಾಲದಿ
ಮುದುಕನಾಗಿ ಕಾಂಬ ಮನೋಹರ ಬಹುಮಹಿಮಗಾರ
ಪದುಮವದನ ಮದನನಯ್ಯ
ಪದುಮವತಿಯ ಪ್ರಾಣಪ್ರಿಯ
ಒದಗಿಬಂದ ಭಕುತಜನರನು
ಸುದಯದಿಂದ ಕರೆದು ಪ್ರಸಾದ
ಮುದದಿ ನೀಡುತ ಕೃಪೆಯದೋರಿ
ಸದಮಲಸಂಪದವನೀವನ

ತೀರದೀತನ ಲೋಕಶೃಂಗಾರ ಏರಿನೋಡಲು
ಪಾರಗಿರಿತುದಿ ಗಾಳಿಗೋಪುರ ಮುಂದೆ ನಡೆಯಲು
ದಾರಿಯಲಿ ಕೊಳ್ಳ ಏಳು ವಿಸ್ತಾರ ಪರಮಪರತರ
ತೋರುವ ಮಹ ಗುಡಿಯು ಗೋಪುರ
ದ್ವಾರ ಚಿನ್ನದ ಕಳಸ ಬಂಗಾರ
ಗಾರು ಮಾಡದೆ ದಾಸಜನರನು

ಮೋಹನ

ಪಾದವ ತೊಳೆದ ಗಗನ ರಾಜನು
ದೇವರ ಪಾದವ ತೊಳೆದ ಗಗನ ರಾಜನು

ಪಾದಪದ್ಮವ ನೋಡಿ ಪದ್ಮಾವತಿಯೂ ನಿಮಗೆ
ಮುದದಿಂದಲೇ ಇತ್ತು ಮೂರ್ತ ಮಾಡಿಸುವೆನೆಂದು
ದೇವರ ಪಾದವ ತೊಳೆದ ಗಗನ ರಾಜನು

ಚಿನ್ನದ ತಂಬಿಗೆ ಉದಕವ
ಧರಣಿ ಚೆನ್ನಾಗಿ ತೊಳೆಯೇ ಮುದ್ದು ಪಾದವ
ಮನೋಹರ ಸ್ತುತಿ ಮಾಡಿ ಮಾನ್ಯ ಶ್ರೀ ವೆಂಕಟೇಶನ
ಪಾದವ ತೊಳೆದ ಗಗನ ರಾಜನು

ಪಟ್ಟೆ ಪೀತಾಂಬರದಿಂದ ವರಿಸುತಾ
ಸಮ ಪ್ರೀತಿಯಿಂದಲಿ ಅಳಿಯನ ನೋಡುತಾ
ಚಿನ್ನ ಚೆಲುವ ನಮ್ಮ ಹೆಣ್ಣಿಗೆ ತಕ್ಕವನೆಂದು
ಪಾದವ ತೊಳೆದ ಗಗನರಾಜನು

ಪುಣ್ಯ ಪುರುಷೋತ್ತಮ ಕೇಳುತ್ತಾ
ಧರಣಿ ಚೆನ್ನಾಗಿ ನೋಡುತಾ
ಪೂರ್ವ ಪುಣ್ಯದ ಫಲ ಹಣ್ಣು ನಮಗಾಯಿತೆಂದು ನಮ್ಮಿಷ್ಟಾ
ವೆಂಕಟ ವಿಠ್ಠಲ ದೊರಕಿದನೆಂದು
ಪಾದವ ತೊಳೆದ ಗಗನರಾಜನು

## ೭೧

ಮಧ್ಯಮಾವತಿ

ಪಾಪೋಸು ಹೋದುವಲ್ಲ ಸ್ವಾಮೀ ಎನ್ನ

ಶೇಷಾದ್ರಿಯಲಿ ಸ್ವಾಮಿ ಪುಷ್ಕರಿಣಿ ಮೊದಲಾದ
ಪರಿಪರಿ ತೀರ್ಥ ಸ್ನಾನಗಳ ಮಾಡಿ
ಹರಿದಾಸರ ಕೂಡಿ ಗಿರಿರಾಯರ ಮೂರ್ತಿ
ದರುಶನದಲ್ಲಿ ಮೈಮರೆತಿರಲು ಎನ್ನ

ಪರಮಭಾಗವತರ ಹರಿಕಥೆ ಕೇಳಲು
ಪರಮ ಭಕುತಿಯಿಂದ ಕೇಳುತಿರೆ
ಪರಮಪಾಪಿಗಳ ಪಾಲಾಗಿ ಪೋದುವು
ಪರಮ ಪುರುಷನ ಮನಸಿಗೆ ಬಂದೀಗ

ಮಾಯಾದೇವಿ ಎನಗೆ ಮೆಚ್ಚಿ ಕೊಟ್ಟಿದ್ದಳು
ದಾಯಾದಿಗಳು ನೋಡಿ ಸಹಿಸಲಿಲ್ಲ
ಮಾಯಾರಮಣ ನಮ್ಮ ಪುರಂದರ ವಿಠಲನ
ಮಾಯದಿಂದಲಿ ಮಟ್ಟಮಾಯವಾದವು ಎನ್ನ

೭೨

ಬಿಲಹರಿ

ಪಾಲಿಸಯ್ಯ ಪವನನಯ್ಯ
ಪಾಲವಾರಿಧಿಶಯ್ಯ ವೆಂಕಟರೇಯ

ಕಾಲಕಾಲಕೆ ಹೃದಯಾಲಯದೊಳು ನಿನ್ನ
ಶೀಲಮೂರುತಿ ತೋರೊ ಮೇಲುಕರುಣದಿ

ಶ್ರೀಶ ಸಂಸಾರವೆಂಬೊ ಸೂಸುವ ಶರಧಿಯೊ –
ಈಸಲಾರೆನೊ ಹರಿಯೆ ಏ ದೊರೆಯೆ
ದಾಸನೆಂತೆಂದಮ್ಯಾಲೆ ಘಾಸಿಗೊಳಿಸುವುದು
ಲೇಸು ನಿನಗಲ್ಲವಯ್ಯ ಹೇ ಜೀಯ
ದೋಷರಾಶಿಗಳೆಲ್ಲ ನಾಶನ ಮಾಡಿಸು

ಮೂರು ಗುಣಗಳಿಂದ ಮೂರು ತಾಪಗಳಿಂದ
ಮೂರು ಅವಸ್ಥೆಯಿಂದ ಮುಕುಂದ
ಮೂರು ಐದರಿಂದ ಮೂರು ಏಳರಿಂದ
ಮೂರರ ದಾರಿಗಾಣದೆ ಮೂರಾದೆ
ಮೂರು ಹಿಡಿಸಿ ಮ್ಯಾಲೆ ಮೂರೆರಡೋಡಿಸಿ
ಮೂರು ಮೂರು ಭಕ್ತಿಯ ಮೂರು ಕಾಲಕೆ ಇತ್ತು
ಮೂರು ರೂಪನಾಗಿ ಮೂರುಲೋಕವನೆಲ್ಲ
ಮೂರು ಮಾಡುವ ಬಿಂಬ ಮೂರುತಿ ವಿಶ್ವ

ಕರುಣಾಸಾಗರ ನಿನ್ನ ಸ್ಮರಣೆಮಾತ್ರದಿ ಸಕಲ
ದುರಿತ ಪರಿಹಾರವೆಂದು ನಾ ಬಂದು
ಮರೆಹೊಕ್ಕಮ್ಯಾಲೆನ್ನ ಪೊರೆಯಬೇಕಲ್ಲದೆ
ಜರಿದು ದೂರ ನೂಕುವರೆ ಮುರಾರೆ
ಮರುತಾಂತರ್ಗತ ಗೋಪಾಲವಿಠಲ ಈ
ಶರೀರವ ನಿನ್ನ ಚರಣಕರ್ಪಿಸಿದೆನೊ
ಸರಿಬಂದದ್ದು ಮಾಡೊ ಬಿರುದು ನಿನ್ನದು ದೇವ
ಪರಮದಯಾನಿಧೆ ಉರಗಾದ್ರಿವಾಸ

## ೭೩

ಪೊರೆ ಸುರೇಶ ಶ್ರೀಶ ಶ್ರೀನಿವಾಸ
ದುರಿತವಿನಾಶ ಪರಮಪ್ರಕಾಶ

ಅನುದಿನ ನಿಮ್ಮಯ ನೆನಪಿನ ಘನಸುಖ
ಕರುಣಿಸಿ ಎನ್ನ ಕನಿಕರದೊಡನೆ

ಚಿಂತೆನಿವಾರಣ ಚಿಂತೆನೀಗಿಸಿ ಎನ್ನ
ಸಂತತದಿಂಪೊರೆ ಸಂತರ ಪ್ರಿಯಕರ

ಪೋಷಿಸೆನ್ನ ವೆಂಕಟೇಶ ಶ್ರೀಶ ಶ್ರೀನಿವಾಸ
ಶೇಷಗಿರಿನಿಲಯ ಶ್ರೀ ಇಂದಿರೇಶ ಈಶ

ಹೇಸಿಯಿವನೆಂದೆನುತ ದೂಷಣೆಯ ಮಾಡದಿರು
ದೋಷದೂರನೆ ನಿನ್ನ ದಾಸ ನಾನಭವ
ದಾಸಜನರ ಮನದುಲ್ಲಾಸದೇವರು ನೀನು
ದಾಸನ ಆಸೆಯನು ಪೂರೈಸಿ ಸಲಹಯ್ಯ

ಕುನ್ನಿಕುಲದಲಿ ಜನಿಸಿ ಬನ್ನಬಡಲಾರದೆ
ಉನ್ನತೋನ್ನತಮಹಿಮ ನಿನ್ನ ಬೆನ್ನು ಬಿದ್ದೆ
ಭಿನ್ನತಾರದೆ ಎನಗೆ ನಿನ್ನ ದರ್ಶನವಿತ್ತು
ಉನ್ನತಮತಿ ನೀಡಿ ಮನ್ನಿಸಿ ಸಲಹು

ನರರ ಹಂಗನು ಬಿಡಿಸಿ ಕರುಣಿಸೆಲೊ ನಿತ್ಯ ತವ
ಶರಣಜನರುಂಡು ಮಿಕ್ಕ ಪರಮಪ್ರಸಾದ
ಶರಣೆಂದು ಚರಣಕ್ಕೆ ಮರೆವೊಕ್ಕೆ ನೆರೆನಂಬಿ
ತಿರುಪತೀಶನೆ ಭಕ್ತಕರುಣಿ ಶ್ರೀರಾಮ

## ೭೫

ಪ್ರಾತಃಸ್ಮರಾಮಿ ರಮಯಾ ಸಹ ವೇಂಕಟೇಶಂ
ಮಂದಸ್ಮಿತಂ ಮುಖಸರೋರುಹ ಕಾಂತಿರಮ್ಯಮ್
ಮಾಣಿಕ್ಯಕಾಂತಿ ವಿಲಸನ್ಮುಕುಟೋರ್ಧ್ವಪುಂಡ್ರಂ
ಪದ್ಮಾಕ್ಷಲಕ್ಷಮಣಿಕುಂಡಲಮಂಡಿತಾಂಗಮ್

ಪ್ರಾತರ್ಭಜಾಮಿ ಕರರಮ್ಯ ಸುಶಂಖಚಕ್ರಂ
ಭಕ್ತಾಭಯಪ್ರದಕಟಿಸ್ಥಲದತ್ತಪಾಣಿಮ್
ಶ್ರೀವತ್ಸಕೌಸ್ತುಭಲಸನ್ಮಣಿಕಾಂಚನಾಢ್ಯಂ

ವೈಕುಂಠಮತ್ರ ಭಜತಾಂ ಕರಪಲ್ಲವೇನ

ವ್ಯಾಸರಾಜಯತಿಪ್ರೋಕ್ತಂ ಶ್ಲೋಕತ್ರಯಮಿದಂ ಶುಭಂ
ಪ್ರಾತಃಕಾಲೇ ಪಠೇದ್ಯಸ್ತು ಪಾಪೇಭ್ಯೋ ಮುಚ್ಯತೇ ನರಃ

## ೭೬

### ಮಧ್ಯಮಾವತಿ

ಬಂದು ನಿಂದಿಹ ನೋಡಿ, ಭೂತಳದಿ ವೆಂಕಟ
ಇಂದಿರೆಯ ಒಡಗೂಡಿ, ಒಪ್ಪುವ ನಿರಂತರ
ಪೊಂದಿ ಭಜನೆಯ ಮಾಡಿ, ಆನಂದಗೂಡಿ

ವಂದಿಸುತ ಮನದೊಳಗೆ ಇವನಡಿ
ದ್ವಂದ್ವ ಭಜಿಸಲು ಬಂದ ಭಯಹರ
ಇಂದುಧರ ಸುರವೃಂದನುತ ಗೋ
ವಿಂದ ಘನ ದಯಾಸಿಂಧು ಶ್ರೀಹರಿ

ದ್ವಾರದೆಡಬಲದಲ್ಲಿ ಜಯವಿಜಯರಿಬ್ಬರು
ಸೇರಿ ಸೇವಿಪರಲ್ಲಿ ಸನಕಾದಿನುತ ಶೃಂ
ಗಾರ ನಿಧಿ ಅಂಗದಲ್ಲಿ ಮುತ್ತಿನಲಿ ಶೋಭಿಪ
ಹಾರ ಪೊಂದಿಹುದಲ್ಲಿ ವಿಸ್ತಾರದಲ್ಲಿ
ವಾರವಾರಕೆ ಪೂಜೆಗೊಂಬುವ
ಹಾರ ಮಕುಟಾಭರಣ ಕುಂಡಲಧಾರ ಭುಜ ಕೇ
ಯೂರಭೂಷಿತ ಮಾರಪಿತ ಗುಣ ಮೋಹನಾಂಗ
ಚಾರು ಪೀತಾಂಬರ ಕಟಿ ಕರವೀರ ಕ
ಲ್ಹಾರಾದಿ ಪೂವಿನ ಹಾರ ಕೊರಳೊಳು ಎಸೆವು
ಶಿರ ವದನಾರವಿಂದನ ನಗುತ ನಲಿಯುತ

ಎಲ್ಲ ಭಕುತರಭೀಷ್ಟ ಕೊಡುವುದಕೆ ತಾ ಕೈ

ವಲ್ಲಭನ ಗುಣ ಪೊಗಳದಿಹ ಜಗ ಖಿಲ್ಲರೆದವಲ್ಲಣ ಪರಾಕ್ರಮ
ಮಲ್ಲಮರ್ದನ ಮಾತುಳಾರಿ ಫಲ್ಗುಣನ ಸಖ ಪ್ರಕಟನಾಗಿಹ
ದುರ್ಲಭನು ಅಘದೂರ ಬಹುಮಾಂಗಲ್ಯ ಹೃದಯನು ಸೃಷ್ಟಿಗೆ
ಉಲ್ಲಾಸ ಕೊಡುತಲಿ ಚಂದದಿಂದಲಿ

ಪದಕ ಕೌಸ್ತುಭಧಾರ ಸರಿಗೆಯ ಕಂಧರ
ಸುದರುಶನದರಧಾರ ಸುಂದರ ಮನೋಹರ
ಪದಯುಗದಿ ನೂಪುರ ಇಟ್ಟಿಹನು
ಸನ್ಮುನಿ ಹೃದಯಸ್ಥಿತ ಗಂಭೀರ ಬಹು ದಾನಶೂರ
ವಿಧಿ ಭವಾದ್ಯರ ಪೊರೆವ ದಾತನು
ತುದಿ ಮೊದಲು ಮಧ್ಯಮ ವಿರಹಿತನು ಉದುಭವಾದಿಗಳೀವ ಕರ್ತನ
ತ್ರಿದಶಪೂಜಿತ ತ್ರಿಭುವನೇಶ ಸದುವಿಲಾಸದಿ ಸ್ವಾಮಿತೀರ್ಥದಿ
ಉದಿಸುತಿರೆ ಸಿರಿ ಮಹಿಳೆ ಸಹಿತದಿ ಪದುಮನಾಭ ಪುರಂದರವಿಠ್ಠಲ
ಪ್ರತಿ ವರುಷ ಬ್ರಹ್ಮೋತ್ಸವದಿ ಮೆರೆಯುತ

೭೭

ಪೂರ್ವಿ

ಬಂದೆವಯ್ಯ ಗೋವಿಂದಶೆಟ್ಟಿ

ಇಂದು ನಿಮ್ಮ ಹರಿವಾಣಪ್ರಸಾದವುಂಟೆನಲಾಗಿ

ಅಪ್ಪಾಲು ಅತಿರಸ ತುಪ್ಪ ಕಜ್ಜಾಯವು
ಒಪ್ಪುವ ಯಾಲಕ್ಕಿ ಶುಂಠಿ ಮೆಣಸು
ಅಪ್ಪರೂಪವಾದ ಕಜ್ಜಾಯ ರಾಶಿಗಳ
ಛಪ್ಪನ್ನದೇಶಕೆ ಮಾರುವ ಶೆಟ್ಟಿ

ಒಡೆದ ಮಡಕೆಯನ್ನು ಇಡದೆ ನಾಮವಮಾಡಿ

ಶೇಷಗಿರಿಯ ಮೇಲೆ ಇಷ್ಟ ತಿಮ್ಮಶೆಟ್ಟಿ
ದೇಶಕೆ ಪ್ರಸಾದವ ನಡೆಸುವ ಶೆಟ್ಟಿ
ಆಶೆಯಿಂದ ಹಣಕಾಸು ಗಳಿಸುವ ಆದಿ
ಕೇಶವ ನಾರಾಯಣನೆಂಬ ಶೆಟ್ಟಿ

## ೭೮

ಮುಖಾರಿ

ಬಂದೆ ಬಂದೆ ಸ್ವಾಮಿಯೆ ಬಂದೆ ಬಂದೆ

ಬಂದೆ ಬಂದೆ ಗೋವಿಂದ ಗೋವಳ ಬಾಂಧವ ಭಕ್ತವತ್ಸಲ
ಇಂದಿರೇಶ ಶ್ರೀವೇಂಕಟಾ ನಿನ್ನ ಸಂದರುಶನಕೆ ಸಾಗಿ ನಾನಿ

ನಡೆದು ನಡೆಸುತ ನುಡಿದು ನುಡಿಸುತ
ಅಡಿಗಡಿಗೆ ಕಾಪಾಡುತ
ಒಡನೆ ಆಡುತ ಬಿಡದೆ ಕ್ಷಣವನು
ಸಡಗರದಿ ಕರೆತರಲು ನಾನಿಲ್ಲಿ

ಒಂದು ರೂಪದಿ ನಿಂದು ಎನ್ನಲಿ
ಚೆಂದದಿಂ ಕರೆತಂದೆ ಇಲ್ಲಿಗೆ
ಒಂದರಿಯೆ ನಿನ್ನ ವಂದಿಸುವ ಬಗೆ
ಬಂದೊದಗೊ ಎನ್ನ ವದನಕೆ

ಆಪ್ತ ಅನಿಮಿತ್ತ ವ್ಯಾಪ್ತ ಸರ್ವತ್ರ
ಗುಪ್ತ ಗುಣಗಣ ಪೂರ್ಣನೆ
ಪ್ರಾಪ್ತ ನೀನೆನಗಾಗಬೇಕೆಂದು
ವ್ಯಾಪ್ತಿ ನಿನ್ನದು ಹುಡುಕುತಲಿ ನಾ ಬಂದೆ

ಬಂದೆ ಬಂದೆ ನೀ ಬಂದಂತೆ
ಕರೆ ತಂದುದಕೆ ಫಲ ನೀನೆ ಬಲ್ಲೆ
ಸಂದರುಶನ ನಿನಗೆ ನೀ
[illegible] ನಾ ಬಂದೆ

ನಿನಗೆ ಅರ್ಪಿಸಬೇಕೆನುತ ನಾನಿಲ್ಲಿ

ರಕ್ಷಶಿಕ್ಷಕ ಮೋಕ್ಷದಾಯಕ
ಸೂಕ್ಷ್ಮಘನ ಮಹವ್ಯಾಪಕ
ಕುಕ್ಷಿಯೊಳು ಜಗದ್ಭರಿತ ಪೂರಿತ
ಅಕ್ಷಯ ಫಲದಾಯಕಾ

ನಮೋ ನಮೋ ನಾಗಾರಿವಾಹನ
ನಮೋ ನಮೋ ಸುರಸುಪ್ರಸನ್ನನೆ
ನಮೋ ನಮೋ ಗೋಪಾಲ ವಿಠಲ
ನಮಿಪ ಭಕ್ತರ ಸಲಹುವನೆಂದು

## ೭೯

ತೋಡಿ

ಬಣ್ಣಿಸಲಳವೆ ನಿನ್ನ ವೆಂಕಟರನ್ನ

ಬಣ್ಣಿಸಲಳವೆ ಭಕ್ತವತ್ಸಲ ನಿನ್ನ
ಪನ್ನಂಗಶಯನ ಪಾಲ್ಗಡಲೊಡೆಯನೆ ದೇವ

ಅಸಮ ಸಾಹಸಿ ಸೋಮಕನೆಂಬ ದನುಜನು
ಶಶಿಧರನ ವರದಿ ಶಕ್ರಾದ್ಯರಿಗಳುಕದೆ
ಬಿಸಜಸಂಭವನ ಠಕ್ಕಿಸಿ ನಿಗಮವ ಕದ್ದು
ವಿಷಧಿಯೊಳಡಗಿರಲಾಗ ಬಂದಮರರು
ವಸುಧೀಶ ಕಾಯಬೇಕೆಂದೆನಲವನ ಮ
ರ್ದಿಸಿ ವೇದಾವಳಿಯ ತಂದು ಮೆರೆದ ದಶ
ದಿಸೆಯೊಳು ಬ್ರಹ್ಮಗಿಂದು ವೇದವ ಕರು
ಣಿಸಿದೆ ಕಂಜಾಕ್ಷ ಕೇಶವ ದಯಾಸಿಂಧು

ಮಂದರಾದ್ರಿಯ ಕಡಗೋಲಿಗೈದತುಳ ಫ
ಣೇಂದ್ರನ ತನು ನೇಣಿಸಂದದಿ ಬಂಧಿಸಿ
ಸಿಂಧು ಮಥಿಸುತಿರಲು ಘನಾಚಲ
ವಂದು ಮುಳುಗಿಪೋಗಲು ಬೆನ್ನಾಂತು ಮು
ಕುಂದನೆ ಸಲಹಿದೆ ಸುರರು ಪೊಗಳಲು

ಖಳಶಿರೋಮಣಿ ಕನಕಾಕ್ಷನೆಂಬಸುರನು ನಿ
ಮ್ಮೊಳು ಸೆಣಸುವೆನೆಂದು ತವಕದಿಂದಲಿ ಬಂದು
ಬಲದ ಕಡುಹಿನಿಂದಲಿ ಚೋರತನದಿಂದ
ಇಳೆಯ ಕದ್ದು ರಸಾತಳದೊಳಗಿರೆ ನಿನ್ನ
ಪೊಳೆವ ಕೋರೆಗಳಿಂದ ತಿವಿದು ಕೊಂದವನ ಅ
ಪ್ಪಳಿಸಿ ದಿಂಡುಗೆಡಹಿ ಬೇಗದಿ ಅವನ
ಬಲವ ಕೆಡಿಸಿ ಮಡುಹಿ, ಈ ಮಹೀ
ಲಲನೆಯ ಕೈಕೊಂಡೆ ಸುರರನ್ನು ಸಲಹಿ

ಪಗಲಿರುಳಿವಿಲ್ಲ ಕನಕಕಶಿಪುವು ತನ್ನ
ಮಗನ ಪರಿಯ ತೋರೆಂದವನ ಬಾಧಿಸುತಿರೆ
ಚಿಗಿದು ಕಂಭವನೊಡೆದಧಿಕ ರೋಷಾಗ್ನಿ ಕಾ
ಬೊರ್ಗೆ ಸೂಸಿ ಗಗನ ಮಂಡಲ ಧಗಧಗಧಗಧಗ
ಧಗಿಸೆ ಪ್ರಜ್ವಾಲೆಯುಗುಳಿ ಹಿರಣ್ಯಕನ ಕೂ
ರುಗುರಿಂದೊಡಲ ಸೀಳಿ ರಕ್ತವ ಚೆಲ್ಲಿ
ಬಗೆದು ಕರುಳಮಾಲೆ ಧರಿಸಲು ನರ
ಮೃಗರೂಪ ತ್ರಾಹಿಯೆಂದನು ಶಶಿಮೌಳಿ

ಕುಲಿಶಧರನ ಗೆದ್ದು ಕುವಲಯದಲಿ ಭುಜ
ಬಲ ವಿಕ್ರಮನು ಸೌಭಾಗ್ಯಗಳುನ್ನತಿಯಿಂದ
ಬಲು ವಾಜಿಮೇಧ ಗೈಯಲು ವಟು ವೇಷವ
ತಳೆದು ತ್ರಿಪಾದ ಭೂಮಿಯ ದಾನವ ಬೇಡಿ
ಬಲಿಯ ಹಮನು ಮುರಿಯಬೇಕೆಂದವನು ಕೊಟ

ಕಡುಧೀರ ದೇವದೈತ್ಯರಿಗಂಜದವನ ಬೆಂ
ಬಿಡದೆ ಸಂಗ್ರಾಮದೊಳಧಿಕ ಸಮರ್ಥನ
ಹೊಡೆದು ತೋಳ್ಗಳ ಕುಟ್ಟಿ ಕೆಡಹಿದಾಗಸದಳ
ಮೃಡ ಮುಖ್ಯ ದೇವ ಸಂತತಿ ನೋಡೆ ಕ್ಷತ್ರೇಶ
ಪಡೆಯ ನೆಲಕೆ ಸವರಿ ಮಾತೆಯ ತಲೆ
ಕಡಿದು ತತ್ಪಿತಿಗೆ ತೋರಿ ಪಿಡಿದ ಗಂಡು
ಗೊಡಲಿಯ ಕರದಲಿ ಬಿರುದ ಘನಶೌರಿ

ದಶರಥರಾಜ ಕೌಸಲ್ಯರ ಮಗನಾಗಿ
ಋಷಿ ವಿಶ್ವಾಮಿತ್ರನಧ್ವರವ ರಕ್ಷಿಸಿ ಘನ
ವಿಷಕಂಠ ಧನುವ ಖಂಡಿಸಿ ಜಾನಕಿಯ ತಂದು
ತ್ರಿಶಿರದೂಷಣ ಖರರಳಿದು ವಾಲಿಯನೊಂದು
ನಿಶಿತ ಶಸ್ತ್ರದಿ ಸಂಹರಿಸಿ ಸಾಗರವ ಬಂ
ಧಿಸಿ ಲಂಕೆಯ ದಹಿಸಿ ರಾವಣ ರ
ಕ್ಕಸನನ್ನು ಕತ್ತರಿಸಿ ವಿಭೀಷಣ
ಗೊಸೆದು ಪಟ್ಟವಗಟ್ಟಿ ಮೆರೆದೆಯೊ ಸಾಹಸಿ

ದೇವಕಿ ವಸುದೇವರಲಿ ಜನಿಸಿ ಲೋಕ
ಪಾವನಗೈದು ಪನ್ನಗನ ಪೆಡೆಯ ಮೆಟ್ಟಿ
ಗೋವಳರ ಸಲಹಿ ಗೋವರ್ಧನ ಗಿರಿಯೆತ್ತಿ
ಮಾವ ಕಂಸನ ಕೊಂದು ಮಲ್ಲರ ಮರ್ದಿಸಿ ಸತ್ಯ
ಭಾಮೆಗೆ ಸುರತರುವನು ಕಿತ್ತು ತಂದಿತ್ತ
ತಾವರೆದಳ ಸುನೇತ್ರ, ತ್ರಿಭುವನ
ಪಾವನ ಚರಿತ್ರ ಶ್ರೀ ರುಕ್ಮಿಣಿ
ದೇವಿ ಮನೋಹರ ಸುಲಲಿತಗಾತ್ರ

ದುರುಳ ದಾನವರುಗಳಂದು ಖೇಚರದೊಳು
ಹರಿಹರ ಬ್ರಹ್ಮಾದಿಗಳಿಗಳವಡದೆ ಮು

ಯರಸಿ ಕಾಣದ ಮಹಿಮ ಸಾಮಜರಾಜ
ವರದ ಸುಪರ್ಣವಾಹನ ಸಾರ್ವಭೌಮ

ಮಣಿಮಯ ಖಚಿತಾಭರಣದಿಂದೆಸೆವ ಲ
ಕ್ಷಣವುಳ್ಳ ದಿವ್ಯ ವಾಜಿಯನೇರಿ ರಣದೊಳು
ಕುಣಿವ ಮೀಸೆ ಕೋರೆದಾಡೆ ಭೀಕರ ಘೋರ
ಬಣಗು ದೈತ್ಯರ ತಲೆ ಕಡಿದು ಎಸೆವ ಭೂತ
ಗಣಕಾಹುತಿಯಿತ್ತು ಭೂಭಾರವಿಳುಹಿದೆ
ರಣಭಯಂಕರ ಪ್ರಚಂಡ ಮೂರ್ಜಗದೊಳ
ಗೆಣೆಗಾಣೆ ನಿನಗುದ್ದಂಡ ಕಲ್ಕಿ ದಿನ
ಮಣಿ ಕೋಟಿ ತೇಜ ದುಷ್ಕೃತ ಕುಲ ಖಂಡ

ಚಿತ್ತಜಸ್ಯೆಯ್ಯನೆ ಚಿನುಮಯರೂಪ ದೇ
ವೋತ್ತಮ ವರಶಂಖಚಕ್ರ ಗದಾಂಬುಜ
ಉತ್ತಮಾಂಗದ ಮಣಿಮಕುಟ ಕುಂಡಲಪ್ರಭೆ
ವ್ಯಕ್ತಕೌಸ್ತುಭ ಪೀತಾಂಬರ ಕಟಿ ಸೂತ್ರ ಶ್ರೀ
ವತ್ಸಲಾಂಛನ ಕೇಯೂರ ಕಂಕಣ ಭೂಷ
ನಿತ್ಯ ವೈಕುಂಠವಾಸನಾಗಿಹ ಪುರು
ಷೋತ್ತಮ ಶ್ರೀನಿವಾಸ ಪುರಂದರ
ವಿಠಲ ತಿರುಮಲೇಶ ಪಾಹಿ ಸರ್ವೇಶಾ

## ೮೦

### ಪೂರ್ವಿ

ಬಣ್ಣಿಸಾಲೆಮ್ಮಾ ನಾನೂ

ಬಣ್ಣಿಸಾಲಮ್ಮ ನಾ ಬಹಳ ಮಹಿಮನ್ನ
ಚಿನ್ಮಯ ನಗಾಧಿಪ ಚಲ್ವ ತಿಮ್ಮಪ್ಪನ

ಮಲ ಸ್ವಾಮಿ ಪುಷ್ಕರ ಮಹೀತೀರ್ಥವ ತೀರಾ
ದಲಿ ಬೇಕಾದ ಧನ ಧಾನ್ಯಾ ಸಂಪದಾ
ಹಲವು ಕಾಮ್ಯವನೀವ ಹೊಗಳಿದರನು ಕಾವಾ
ಸುಲಭರೊಡೆಯನ ಕಂಡೂ ಹಸಿದ ಕಂ
ಗಳ ಹಬ್ಬ ದಣಿಯಾಲುಂಡೂ ಬಹು ತೋಷಾ
ತುಳುಕುವಾ ಸುಜನವಿಂಡು ಪಾರಂವಾರಾ

ಪೇಳಲೀನಯ್ಯಾ ನಾ ಪರಲೀಯ ಸೊಬಗು ನಾ
ಆಲಯದಿಂ ಗಡಾ ಜನಿಜನ ಸಂಗಡಾ
ಟೋಳ ಛಪ್ಪರವೊತ್ತಾ ಛತ್ರಚಾಮರ ಹೊತ್ತಾ
ಕಾಳಿ ಶೀಗುರಿ ಠಕ್ಕೆ ಕಂಬುಕಾಗಳಲಾಕೆ
ಮೇಳೈಸಿ ಮಹಿಮರು ಮಹದಾನಂದದವರು
ಘೋಳಿಡುವರು ಹರಿ ಗೋವಿಂದ ನೆನವರು
ಕಾಲಾಟಾದಲ್ಲವರೂ ಕೀರ್ತಿಪ ಗೀತ ತಾಳ ದಂಡಿಗೆಯವರು
ಬೆಳಗೂಪಂಥ ಸಾಲ ಪಂಜೀನವರೂ ಪಾರಂವಾರ

ವಾಂಛಿತ ಫಲಗಳು ಒದಗಲು ಹರಿಯೊಳು
ವಂಚನೆ ಇಲ್ಲದೆ ಒಂದೊಂದು ಬಗೆಯಾದೆ
ಕಾಂಚನಾ ಮುಡುಪಿಲಿ ಕಡು ಬದ್ಧಾಂಜಲಿಯಲಿ
ಮಿಂಚುವ ಭಕ್ತಿಲಿ ಮಧುಕರವೃತ್ತಿಲಿ
ಪಂಚಾಬ್ದಾದ್ದಸುಳರು ಪ್ರಾಯದ ಆಬಲೇರು
ಹಿಂಚಾದಾ ವಯಸಾದಾ ಹಿರಿಯರು ಹರುಷದಿ
ಸಂಚಿತ ಹರಿಕೆಯವರೂ ತೊಟ್ಟಿಲು ಮನೆ
ಮಂಚವ ಹೊತ್ತವರೂ ದೇಶಗಳಿಂದಾ
ಕಾಂಕ್ಷೆವಿಡಿದು ಬಂದಾರೂ ಪಾರಂವಾರ

ಸ್ವಾಮಿ ವರಹಪಾದಾ, ಸರಸಿಜಾಂಬುಸ್ವಾದಾ
ಶಾಮಹಾತ್ಮ್ಯಂಕದಾಶಾತ ಕುಂಭಾಶದಾ
ವ್ಯೆಮನ ವಾಸನಾ ವಿದಿ ಭವೇಂದ್ರಾಸನಾ

ನೇಮದಿ ಕಂಡೆರಗೀ ಸ್ವಮಯ್ಯೊಳು
ರೋಮಪುಳಕಿತಾಗೀ ಸದ್ ಭಕ್ತರ
ಸ್ತೋಮವು ಮುಕ್ತರಾಗಿ ವಾರಂವಾರ

ಗಿರಿಯೊಳಗಮಲಂತರ್ಗಂಗೆ ಪಾಪಾಂತೆ
ವರ ಪಾಂಡು ತೀರ್ಥ ಬಿಲ್ವಾಂಬು ಕಚ್ಛಪ ತೀರ್ಥ
ಸಿರಿ ವರಹ ಮಚ್ಛ ಸಲಿಲ ಪಾವನಲಕ್ಷ್ಮಿ
ಸರ ನಾರದೀಯ ಸರಸ್ವತೀಯ ತೋಯ
ಮೆರೆವ ತುಂಬುರ ಜಲ ಮೊದಲಾದ ಸ್ಥಳಗಳ
ಸರವ ಸಾನಿಧ್ಯದ ಸ್ವಾಮಿ ಪುಷ್ಕರಣಿಯಾ ನೆರಕೊಂಡು ಪೂತಂ
ಸಿರಿಹರಿಪಾದ ಸರಸೀಜರತ ಭೃಂಗರೂ, ಜ್ಞಾನೋನ್ಮತ್ತ
ಭರಿತಾಂಗ ಮತ್ತಾಂಗರೂ ವಾರಂವಾರ

ನಳಿನಾಕ್ಷ ಪದವಾರಿ ನಿತ್ಯ ಸೇವಿಸರು
ತುಳಸಿ ತುದಿಯಾ ಪೊನ್ನಾ ತಳಗೀಯದ ಧಾನ್ಯ
ಬಲು ರುಚಿ ಅಪ್ಪಾಲು ಬಕುಳಾನ್ನ ಪೊಂಗಾಲು
ಸಲೆ ಮೃದು ಘಾರಿಗೆ ಶಿಖಿನುಂಡೆಂಣೂರಿಗೆ
ಪುಳಿತಿಕ್ತ ಮಧುಮಿಶ್ರ ಪುಲಸು ಪಾಲಿನ ದೋಸೆ
ಪಲಪು ಪರಿಯ ಘೃತ ಪಕ್ವಪಂಚಾಮೃತ
ಪಾಲಿತ್ರ್ಯಂತೊಳೆ ಮನೋಹರಾ ಪ್ರಸಾದುಂಡು
ಕಳೆವೇರುವರು ಮನೋಹರಾ, ಅಲ್ಲಿಗಲ್ಲಿ
ನಲಿವ ದಾಸರ ಮೋಹರ ವಾರಂವಾರಾ

ಪ್ರಾಪಿಸಂಗಿಯು ಜನ್ನ ಪುಳಿಕಾಪು ಮಜ್ಜನ
ಸಪ್ತೋತ್ಸಹದಲ್ಲಿಯು ನರ ಮುನಿ ಸುರಸಹ
ಸೇವ್ಯಾನಂದನಿಲಯ ಸಾಮಗಾಯನ ಪ್ರಿಯ
ದಿವ್ಯ ರತ್ನಾಭರಣ ಧೀಧಿತ ಸಂಕೀರ್ಣ
ಹವ್ಯಾಸದನುದಿನ ಹನುಮ ಗರುಡ ಯಾನಾ

ಪಂತುವರಾಳಿ

ಬಾ ವೆಂಕಟಶೈಲಾಧಿಪ ಮನ್ಮನಕೆ ತಡಮಾಡುವುದ್ಯಾಕೆ

ಶ್ರೀವಲ್ಲಭ ನಾ ನಿನ್ನಂಘ್ರಿ ಕಮಲಕೆ ನಮಿಸುವೆ ಪ್ರತಿಕ್ಷಣಕೆ
ನೀನೊಲಿದೆನ್ನ ದಯಾವಲೋಕನದಿ
ಪಾವನಮಾಡಲು ದೇವವರೇಣ್ಯ

ವೈಕುಂಠಾಧೀಶ ವಿಗತಕ್ಲೇಶ ಚಿತ್ಸುಖಮಯವಪುಷ
ಆಕಾಶವತ್ಸರ್ವತ್ರಪ್ರಕಾಶ ಶ್ರೀವೆಂಕಟೇಶ
ಶ್ರೀಕಮಲಭವ ಪಾಕಶಮದನ ದಿ
ವಾಕರಪ್ರಮುಖದಿವೌಕಸವರದ

ಸೋಮಾರ್ಕಾನಲಸಂಕ್ರಮ ಋತುರುಕ್ಷ ಸಿತಾಸಿತಪಕ್ಷ
ನಾಮಾಭಿಧೇಯ ಲೋಕಾಧ್ಯಕ್ಷ ಕಮಲಾಯತಾಕ್ಷ
ಸೋಮಭೂಮ ನಿಸ್ಸೀಮಮಹಿಮಶ್ರೀ
ಧಾಮ ರಾಮಘನಶ್ಯಾಮ ಲಲಾಮ

ಮಮ ಸರ್ವಸ್ವಾಮಿ ಮದಂತರ್ಯಾಮಿ ಸರ್ವಾಂತರ್ಯಾಮಿ
ಅಮಿತಾತ್ಮ ನಿರ್ಗುಣ ನಿಷ್ಕಾಮ ಸೇವಿತ ಶ್ರೀಭೂಮಿ
ಶಮಲವಿವರ್ಜಿತ ಅಮಿತಸುಗುಣಪೂ
ರ್ಣಾಮಲಮಹಿಮ ಖಳದಮನ ದಯಾಳೊ

ಪವನಾಂತರಾತ್ಮ ನಿರ್ಮಲಾತ್ಮ ಪರಮಾತ್ಮ ಜ್ಞಾನಾತ್ಮಾ
ಅವಿಕಾರ ಅತಿರೋಹಿತ ಭೂತಾತ್ಮ ಪೂತಾತ್ಮ ಮಹಾತ್ಮಾ
ತ್ರಿವಿಧಜೀವರಿಗೆ ವಿವಿಧ ಫಲಂಗಳ
ತವಕದಿಕೊಟ್ಟು ಪರವರನು ಪಾಲಿಸೊ

ವೇದಸ್ತೇಯಾರಿ ಮಂದರಧಾರಿ ಭೂವರಾಹ ನರಹರಿ

ಸೃಷ್ಟ್ಯಾದಿಕರ್ತ ತ್ರಿಜಗದ್ಭರ್ತ ಲೋಕೈಕಸಮರ್ಥ
ವೃಷ್ಣೀಶ ವೃಂದಾರಕ ರಿಪುಹರ್ತ ಮುಕ್ತರ ಪುರುಷಾರ್ಥ
ಹೃಷ್ಟ ಪುಷ್ಟ ಪರಮೇಷ್ಠಿಜನಕ ಶಿಷ್ಟೇಷ್ಟ
ಹೃಷ್ಟ ಅನಿವಿಷ್ಟ ನಿವಿಷ್ಟ

ದಯದಿಂದ ನೋಡೊ ದೀನೋದ್ಧಾರ ಸದ್ಗುಣಗಂಭೀರ
ಪ್ರಿಯನೀನೆ ಎನಗೆ ಲೋಕೋದ್ಧಾರ ಸೌಂದರ್ಯಸಾರ
ಹಯಮುಖ ಲೋಕತ್ರಯಪಾತ್ರ ಈ
ವಯನಗಮ್ಯ ನಾ ಬಯಸುವೆ ನಿನ್ನ

ಬಹುಮಾತುಗಳ್ಯಾಕೊ ಭವಭಯಹಾರಿ ಬಿನ್ನೈಸುವೆ ಶೌರಿ
ವಿಹಿತಾವಿಹಿತಂಗಳ ನಿನ್ನನು ಮೀರಿ ಮಾಳ್ಪೆನೆ ಕಂಸಾರಿ
ಮಹಿತವಿಮಲ ಸದ್ರಹಿತ ಲಕುಮಿ ಭೂ ಸಹಿತ
ಮನದಿ ಸನ್ನಿಹಿತನಾಗಲು

ದಾತ ನೀನಲ್ಲದನ್ಯರನರಿಯೆ ಕಂಡವರನು ಕರೆಯೆ
ಪ್ರೀತ ನೀನಾಗಸ್ಕೊಳು ಶ್ರೀಹರಿಯೆ ಮೂರ್ಲೋಕವ ದೊರೆಯೆ
ಶ್ರೀತರುಣಿಯಗೂಡೀತನುಸದನಕೆ
ನೀ ತ್ವರಿತದಿ ಜಗನ್ನಾಥವಿಠಲ

## ೮೨

ಆನಂದಭೈರವಿ

ಬಾರಯ್ಯ ಬಾ ಬಾ ಭಕುತರಪ್ರಿಯ ಶ್ರೀನಿವಾಸರಾಯ
ಮಾರಜನಕ ಮುಕ್ತರೊಡೆಯ ದೇವಯ್ಯ ಜೀಯ

ವಾರಿಜಾಲಯಪತೆ ವಾರಿಜನಾಭನೆ ವಾರಿಜಭವಪಿತ
ವಾರಿಜನೇತ್ರನೆ ವಾರಿಜಮಿತ್ರ ಅಪಾರ ಪ್ರಭಾವನೆ

ಕಂದವಿರಿಂಚಿಯು ನಂದಿವಾಹನ ಅಮ –
ರೇಂದ್ರ, ಸನಕ ಸನಂದನಾದಿಮುನಿವೃಂದ ಬಂದು ನಿಂದು
ಧಿಂ ಧಿಂ ಧಿಂ ಧಿಮಿಕೆಂದು ನಿಂದಾಡಲು ಆನಂದದಿ ಮನಕೆ

ಜಗಜನ್ಮಾದಿಕರ್ತೃ ಗೋವಿಂದ ಉದರದಿ ಲೋಕವ
ಲಘುವಾಗಿ ಧರಿಸಿ ಮುಕುಂದ ಭಕ್ತರ ಮನಕೆ
ಝಗಝಗಿಸುತ್ತ ಪೊಳೆವಾನಂದ ನಿಗಮಾವಳಿಯಿಂದ
ಅಗಣಿತ ಮುನಿಗಣ ನಗಖಗಮೃಗಶಶಿಗಗನಮಣ್ಯಾದ್ಯರು
ಸೊಗಸಾಗಿ ಬಗೆಬಗೆ ಪೊಗಳುತಲಿ ಬೇಗ ಚಿಗಿ –
ಚಿಗಿದಾಡಲು ಮುಗುಳುನಗೆಯ ಮಹೋರಗಗಿರಿವಾಸ

ತಡಮಾಡಬೇಡಯ್ಯ ಹೇ ನಲ್ಲ ವಾಕು ಲಾಲಿಸು ಎ –
ನ್ನೊಡೆಯ ಶ್ರೀಗೋಪಾಲವಿಠಲ ದೇವ ಪರಾಕು
ಅಡಿಯಿಡು ಭಕ್ತವತ್ಸಲ ಶ್ರೀ ಲಕುಮಿ ನಲ್ಲ
ಮಡುವಿನೊಳಗೆ ಗಜ ಮೊರೆಯಿಡಲಾಕ್ಷಣ ಮಡದಿಗೆ ಹೇಳದೆ
ದುಡುದುಡನೆ ಬಂದು ಹಿಡಿದು ನಕ್ರನ ಬಾಯಿ
ಕಡಿದು ಬಿಡಿಸಿದನೆ ಸಡಗರದಲಿ ರಮೆ ಪೊಡವಿಯೊಡನೆ ಬೇಗ

೮೩

ಬಾರಯ್ಯ ವೆಂಕಟರಮಣ

ಬಾರಯ್ಯ ವೆಂಕಟರಮಣ ನೀನೆನಗೆ
ಧಾರುಣಿಯೊಳು ನಿನ್ನ ಮೂರುತಿ ತೋರುತ

ಮನವೆಂಬ ಮಂಟಪ ನಿನಗೆ ಹಾಕಿ ಎನ್ನ
ತನುವನೊಪ್ಪಿಸಿ ಕೈಯ ಮುಗಿವೆನಯ್ಯ
ವನಜಜ – ಭವ – ಸುರ ಮುನಿಗಳು ಭಜಿಸುವ
[illegible]

